ಹಂಪಿ ಕನ್ನಡ ವಿಶ್ವವಿದ್ಯಾಲಯ



# 'ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರಾಮನಾಥಪುರ'

ಕನ್ನಡ ಎಂ.ಫಿಲ್. ಪದವಿ ಪರೀಕ್ಷೆಗೆ ಸಂಬಂಧಿಸಿದಂತೆ

ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ಪ್ರಬಂಧ


ಪ್ರಬಂಧಕಾರರು

ರಾಘವೇಂದ್ರ.ಬಿ.ಆರ್.

ಎಂ.ಫಿಲ್ ಪದವಿ ವಿದ್ಯಾರ್ಥಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ

ಮೈಸೂರು–೧೨

ಮಾರ್ಗದರ್ಶಕರು

ಪ್ರೊ॥ಬಿ.ಎಂ.ಚಂದ್ರಯ್ಯ

ನಿವೃತ್ತ ಪ್ರಾಧ್ಯಾಪಕರು

ನಂ.೩, ಬಿ.ಎಡ್.ಕಾಲೇಜು ಪೂರ್ವ,

ಸರಸ್ವತಿಪುರಂ, ಮೈಸೂರು–೦೯


೨೦೦೧–೨೦೦೨

ಹಂಪಿ ಕನ್ನಡ ವಿಶ್ವವಿದ್ಯಾನಿಲಯ



# 'ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರಾಮನಾಥಪುರ'

ಕನ್ನಡ ಎಂ.ಫಿಲ್. ಪದವಿ ಪರೀಕ್ಷೆಗೆ ಸಂಬಂಧಿಸಿದಂತೆ

ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ಪ್ರಬಂಧ



ಪ್ರಬಂಧಕಾರರು

ರಾಘವೇಂದ್ರ.ಬಿ.ಆರ್.

ಎಂ.ಫಿಲ್ ಪದವಿ ವಿದ್ಯಾರ್ಥಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ

ಮೈಸೂರು–೧೨

ಮಾರ್ಗದರ್ಶಕರು

ಪ್ರೊ॥ಬಿ.ಎಂ.ಚಂದ್ರಯ್ಯ

ನಿವೃತ್ತ ಪ್ರಾಧ್ಯಾಪಕರು

ನಂ.೩, ಬಿ.ಎಡ್.ಕಾಲೇಜು ಪೂರ್ವ,

ಸರಸ್ವತಿಪುರಂ, ಮೈಸೂರು–೦೯

೨೦೦೬–೨೦೦೭

# ಘೋಷಣಾ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್.ಪದವಿಯ ವಿದ್ಯಾರ್ಥಿ **ರಾಘವೇಂದ್ರ.ಬಿ.ಆರ್.**(ರಿ.ನಂ:೦೭) ಆದ ನಾನು **'ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರಾಮನಾಥಪುರ'** ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಸಂಶೋಧನಾ ಪ್ರಬಂಧವನ್ನು ಎಂ.ಫಿಲ್. ಪದವಿಯ ಒಂದು ಭಾಗವಾಗಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ **೨೦೦೬-೨೦೦೭ನೇ** ಸಾಲಿನ ಪರೀಕ್ಷೆಗಾಗಿ ಒಪ್ಪಿಸಲು ಸಿದ್ಧಪಡಿಸಿದ್ದೇನೆ.

ನಾನು ಈ ನಿಬಂಧವನ್ನು ಈ ಮೊದಲು ಭಾಗಶಃ ಆಗಲಿ ಅಥವಾ ಪೂರ್ಣವಾಗಿಯಾಗಲಿ ಯಾವುದೇ ಬಗೆಯ ಪದವಿ, ಡಿಪ್ಲೊಮೊ ಅಥವಾ ಯಾವ ವಿಶ್ವವಿದ್ಯಾನಿಲಯಕ್ಕು ಸಲ್ಲಿಸಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

ರಿ.ನಂ.೦೭

ಸ್ಥಳ: ಮೈಸೂರು

ದಿನಾಂಕ: ೨೧.೦೭.೦೭.

ಪ್ರಬಂಧಕಾರರು

# ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿ **ರಿ.ನಂ; ೦೭** ಅವರು ನನ್ನ ಮಾರ್ಗದರ್ಶನದಲ್ಲಿ "**ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರಾಮನಾಥಪುರ**" ಎಂಬ ಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಪ್ರಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ, ಎಂ.ಫಿಲ್ ಅಥವಾ ಯಾವುದೇ ಪ್ರಶಸ್ತಿಗಾಗಲಿ ಒಪ್ಪಿಸಿರುವುದಿಲ್ಲ ಎಂದು ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

ಸ್ಥಳ : ಮೈಸೂರು

ದಿನಾಂಕ: 20.2.2002

# ಕೃತಜ್ಞತೆಗಳು

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಯನ್ನು ತಮ್ಮ ಕೇಂದ್ರಕ್ಕೆ ತಂದು ನಮಗೆಲ್ಲಾ ಅನುಕೂಲ ಮಾಡಿಕೊಟ್ಟ ನಾಡಿನ ಹಿರಿಯ ಸಾಹಿತಿ, ನಾಡೋಜ **ದೇ,ಜ,ಗೌ**. ಅವರಿಗೆ ಹೃದಯಪೂರ್ವಕ ವಂದನೆಗಳು. ಈ ಪ್ರಬಂಧವನ್ನು ಸಿದ್ಧಪಡಿಸಲು ಮಾರ್ಗದರ್ಶಕರಾಗಿ ಒಪ್ಪಿಕೊಂಡು ಹಲವು ಸಲಹೆಗಳನ್ನಿತ್ತು, ಶಿಸ್ತುಬದ್ಧ ಬರವಣಿಗೆಗೆ ನನ್ನನ್ನು ಒಳಪಡಿಸಿದ ಹಿರಿಯ ಚೇತನ **ಪ್ರೊ॥ಬಿ.ನಂ.ಚಂದ್ರಯ್ಯ** ಅವರಿಗೆ ಅಭಾರಿಯಾಗಿರುತ್ತೇನೆ. ಎಂ.ಫಿಲ್.ಪದವಿಯ ರೂಪುರೇಶೆಗಳನ್ನು ನೀಡಿ ಔಚಿತ್ಯಪೂರ್ಣ ಸಲಹೆ ಮತ್ತು ಮಾರ್ಗದರ್ಶನ ನೀಡಿದ ಪೂಜ್ಯ ಗುರುಗಳಾದ ಎಸ್.ಎಂ. ತಳವಾರ್ ಹಾಗೂ ಕಛೇರಿ ನಿರ್ವಾಹಕರಾದ ವೆಂಕಟೇಶ್ ಅವರಿಗೆ ಚಿರರುಣಿ.

ಈ ಪ್ರಬಂಧ ರಚನೆಗೆ ಹಲವು ಮಾಹಿತಿಗಳನ್ನು ನೀಡಿದ ರಾಮಾನಾಥಪುರ ಗ್ರಾಮಸ್ಥರಿಗೆ ಹಾಗೂ ಕ್ಷೇತ್ರಕಾರ್ಯದಲ್ಲಿ ಕೈಜೋಡಿಸಿ ನನ್ನೊಂದಿಗಿದ್ದು ಸಹಕಾರ ನೀಡಿದ ಮಿತ್ರರಾದ ವಿಜಯ್, ಶಿವು, ದೊರೇಶ್, ಬಿ.ಆರ್.ಜಗದೀಶ್ ಹಾಗೂ ನನ್ನ ತಂದೆ ತಾಯಿಗಳನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.

# ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರಾಮನಾಥಪುರ

# ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರಾಮನಾಥಪುರ

## ಅಧ್ಯಯನದ ಉದ್ದೇಶ ಮತ್ತು ವಿಷಯ ವ್ಯಾಪ್ತಿ:-

ವಿಪುಲವಾದ ಭೌಗೋಳಿಕ ಸಂಪತ್ತನ್ನು, ಐತಿಹಾಸಿಕ ಪರಂಪರೆಯನ್ನು ಹೊಂದಿರುವ ಕರ್ನಾಟಕ ಭಾರತದಲ್ಲಿ ವಿಶಿಷ್ಟವಾದ ಸ್ಥಾನವನ್ನು ಹೊಂದಿದೆ. ಶಾಂತಿ ಸೌಹಾರ್ದತೆಗೆ ಪ್ರಪಂಚದಲ್ಲೇ ಹೆಸರುವಾಸಿಯಾದ ಭಾರತ ಸಾಂಸ್ಕೃತಿಕವಾಗಿ ವಿಶ್ವಮಾನ್ಯತೆಯನ್ನು ಪಡೆದಿದೆ. ಇದರ ಅವಿಭಾಜ್ಯ ಅಂಗವಾಗಿರುವ ಕರ್ನಾಟಕ ಕಲೆ, ಸಾಹಿತ್ಯ, ಲಲಿತಕಲೆಗಳಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಬೆಳೆಸಿಕೊಂಡು, ಪ್ರಾಚೀನ ಕಾಲದಿಂದಲೂ ಕಾಲಗತಿಯಲ್ಲಿ ಒದಗಿ ಬಂದ ಏಳು ಬೀಳುಗಳನ್ನು ಲೆಕ್ಕಿಸದೆ ಸ್ವಂತಿಕೆಯನ್ನು ಬೆಳೆಸಿಕೊಂಡು ತನ್ನದೇ ಆದ ಸಂಪ್ರದಾಯ ಮತ್ತು ಸಾಂಸ್ಕೃತಿಕ ಹಿರಿಮೆಯನ್ನು ಮೈಗೂಡಿಸಿಕೊಂಡಿದೆ.

ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಬದುಕಿನ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ವಿಧಾನ, ರೀತಿ–ನೀತಿಗಳು, ಕಟ್ಟು–ಕಟ್ಟಳೆಗಳು, ಸಂಪ್ರದಾಯಗಳು ಒಟ್ಟಾರೆ ಸಂಸ್ಕೃತಿಯ ವಿವರಣೆಯೇ ಆಗಿದೆ. ಜನತೆಯ ಜೀವನವನ್ನು ಕುರಿತಾದ ಇಂತಹ ಅಧ್ಯಯನವನ್ನು ಸಾಂಸ್ಕೃತಿಕ ಅಧ್ಯಯನವೆಂದು ಕರೆಯಬಹುದು. ಈ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರಾಮಾನಾಥಪುರದ ಅಧ್ಯಯನ ಈ ಪ್ರಬಂಧದ ಉದ್ದೇಶ.

ಕರ್ನಾಟಕ ಅನೇಕ ಸಾಮ್ರಾಜ್ಯಗಳ ತವರುಮನೆ. ಅನೇಕ ಮನೆತನಗಳ ಗಣಿ, ಶಿಲ್ಪಕಲೆಯ ತವರೂರು, ಇಲ್ಲಿಯ ಸಂಸ್ಕೃತಿಯ ಪರಂಪರೆ ವೈಭವಯುತ, ವೈವಿಧ್ಯತೆಯಿದ್ದರೂ ಏಕತೆ, ಸಹನೆ ಮತ್ತು ಪರಸ್ಪರ ಹೊಂದಿಕೊಳ್ಳುವ ಮನೋಭಾವ, ವಿವಿಧ ಮತಗಳ ಸಮನ್ವಯ ಇವುಗಳೆಲ್ಲ ನಮ್ಮ ಈ ಸಂಸ್ಕೃತಿಯ ತಿರುಳು. ಇಂತಹ ನಾಡಿನಲ್ಲಿ ಹಲವಾರು ಪ್ರವಾಸಿ ತಾಣಗಳಿಗೆ ನನ್ನ ಸ್ನಾತಕೋತ್ತರ ಪದವಿಯ ಅಧ್ಯಯನದ ಅವಧಿಯಲ್ಲಿ ಭೇಟಿಯಿತ್ತು, ಗೆಳೆಯರಿಂದ ಕೇಳಿ ತಿಳಿದಿದ್ದ,

ಖುದ್ದಾಗಿ ನಾನು ಭೇಟಿಯಿತ್ತಿದ್ದ ಐತಿಹಾಸಿಕ ಸ್ಥಳವಾದ ರಾಮನಾಥಪುರದ ಬಗ್ಗೆ ಇನ್ನು ಹೆಚ್ಚಿನ ಮಾಹಿತಿ ಪಡೆದುಕೊಳ್ಳುವ ಕುತೂಹಲ ನನಗಿತ್ತು.

ಕಾವೇರಿನದಿಯ ದಂಡೆಯಲ್ಲಿರುವ ಪ್ರಮುಖ ಐತಿಹಾಸಿಕ ಸ್ಥಳಗಳ ಪೈಕಿ ರಾಮನಾಥಪುರ ಒಂದಾಗಿದೆ. ಇಂತಹ ಐತಿಹಾಸಿಕ ಸ್ಥಳವೊಂದರ ವಿಶೇಷತೆ, ವೈಶಿಷ್ಟ್ಯಗಳನ್ನು ಅಧ್ಯಯನ ಮಾಡುವ ಸದವಕಾಶ ಎಂ. ಫಿಲ್ ಪದವಿಯ ಪ್ರಬಂಧ ರಚನೆಯಲ್ಲಿ ದೊರೆತಿದ್ದು ನನ್ನ ಸೌಭಾಗ್ಯವೆಂದೇ ಭಾವಿಸಿದ್ದೇನೆ.

ಪ್ರಸ್ತುತ ಸಂದರ್ಭದಲ್ಲಿ ಎಂ.ಫಿಲ್ ಪದವಿಗೆ ವಿಶೇಷ ನಿಬಂಧ ರಚನೆಗೆ ವಿಷಯದ ಆಯ್ಕೆಗಾಗಿ ಆಲೋಚಿಸುತ್ತಿರುವಾಗ ಈ ಮೊದಲೇ ಕುತೂಹಲ ಭರಿತನಾಗಿದ್ದ ನಾನು ರಾಮನಾಥಪುರವನ್ನೆ ಅಧ್ಯಯನಕ್ಕೆ ಒಳಪಡಿಸಬಾರದೇಕೆಂದು ಚಿಂತಿಸಿ, ಕ್ಷೇತ್ರಕಾರ್ಯ ಕೈಗೊಂಡು ರಾಮನಾಥಪುರದ ಸಾಂಸ್ಕೃತಿಕ ಹಿನ್ನೆಲೆಯನ್ನೆಲ್ಲ ಸಾಧ್ಯವಾದಷ್ಟು ಮಟ್ಟಿಗೆ ಕಲೆಹಾಕಿ ಸಿಕ್ಕ ಅವಕಾಶವನ್ನು ಉಪಯೋಗಿಸಿಕೊಂಡು ಅದರ ಸಾಂಸ್ಕೃತಿಕ ವೈಶಿಷ್ಟ್ಯವನ್ನು ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಂತೆ ಸಂಕ್ಷಿಪ್ತವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

ಈ ಪ್ರಬಂಧದಲ್ಲಿ ರಾಮನಾಥಪುರದ ವಿಶೇಷತೆ, ಭೌಗೋಳಿಕ ಪರಿಚಯ, ರಾಮನಾಥಪುರವೆಂದು ಹೆಸರು ಬರಲು ಕಾರಣವಾದ ಸಂಗತಿ ಮುಂತಾದವನ್ನು ವಿವರವಾಗಿ ಮೊದಲನೇ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಮುಂದುವರಿದು ಐತಿಹಾಸಿಕ ಹಿನ್ನೆಲೆಯಲ್ಲಿ ರಾಮನಾಥಪುರ ಹೇಗಿದ್ದಿರಬಹುದೆಂಬುದನ್ನು ಕುರಿತು 'ಚಾರಿತ್ರಿಕ ಹಿನ್ನೆಲೆಯಲ್ಲಿ ರಾಮನಾಥಪುರ' ಎಂಬ ಎರಡನೇ ಅಧ್ಯಾಯದಲ್ಲಿ ತಕ್ಕಮಟ್ಟಿಗೆ ಚಾರಿತ್ರಿಕವಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಹಾಗೆಯೆ 'ಪೌರಾಣಿಕ ಹಿನ್ನೆಲೆಯಲ್ಲಿ ರಾಮನಾಥಪುರ' ಎಂಬ ೩ನೇ ಅಧ್ಯಾಯದಲ್ಲಿ 'ಪುರಾಣಗಳಲ್ಲಿ' ರಾಮನಾಥಪುರದ ವಿವೇಚನೆ ಅದಕ್ಕೆ ಪೌರಾಣಿಕ ಹಿನ್ನೆಲೆಯಲ್ಲಿದ್ದ ಹಿಂದಿನ ಹೆಸರುಗಳು ಹಾಗು ಪೌರಾಣಿಕವಾಗಿ ರಾಮನಾಥಪುರದಲ್ಲಿ ನಡೆದ ಘಟನೆಗಳನ್ನು ಹಿರಿಯರಿಂದ ಕೇಳಿ ತಿಳಿದು ಹಲವಾರು ಕೃತಿಗಳನ್ನು ಅಭ್ಯಸಿಸಿ ರಾಮನಾಥಪುರದ ಮಹತ್ವವನ್ನು ವಿವೇಚಿಸಲಾಗಿದೆ.

ನಾಲ್ಕನೇ ಅಧ್ಯಾಯ ರಾಮನಾಥಪುರದ ಸಾಮಾಜಿಕ ಹಿನ್ನೆಲೆಯನ್ನು ಕುರಿತದ್ದಾಗಿದೆ.ಏಕೆಂದರೆ ರಾಮನಾಥಪುರದಲ್ಲಿ ವಾಸವಿರುವ ಜನರ ಜಾತಿಪದ್ಧತಿ, ಉಡುಗೆ-ತೊಡುಗೆ, ಆಹಾರ ಪದ್ಧತಿ, ಅಲ್ಲಿನ ಜನರು ಆಚರಿಸುವ ಹಬ್ಬಗಳು, ಅವರ ಉದ್ಯೋಗ ಮುಂತಾದ ವಿಷಯಗಳು ಇಲ್ಲಿ ಚರ್ಚಿತವಾಗಿವೆ.

ರಾಮನಾಥಪುರದಲ್ಲಿ ಬ್ರಾಹ್ಮಣರೇ ಅಧಿಕವಾಗಿರುವುದರಿಂದ ಅವರ ಜನನದಿಂದ ಮರಣದವರೆಗಿನ ಆಚರಣೆಗಳು, ವಿಧಿ-ವಿಧಾನಗಳು ಭಿನ್ನವಾಗಿರುವುದರಿಂದ ಅವರ ಆಚರಣೆಗಳಿಗೆ ಹೆಚ್ಚಿನ ಒತ್ತು ನೀಡಿ ೫ನೇ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಶೈಕ್ಷಣಿಕ ಮತ್ತು ಆರ್ಥಿಕ ವ್ಯವಸ್ಥೆಯ ದೃಷ್ಟಿಯಿಂದ ರಾಮನಾಥಪುರ ಹೇಗಿದ್ದಿರಬಹುದು ಎಂಬ ವಿಶ್ಲೇಷಣೆಯನ್ನು ೬ನೇ ಅಧ್ಯಾಯದಲ್ಲಿ ವಿವರಿಸಲಾಗಿದೆ.

ರಾಮನಾಥಪುರದ ಪ್ರವಾಸಿ ತಾಣಗಳಲ್ಲಿ ಇಲ್ಲಿನ ಒಂದು ವಿಶೇಷತೆ ದೇವಾಲಯಗಳು. ಅದರಲ್ಲೂ ಮುಖ್ಯವಾಗಿ ಆ ದೇವಾಲಯಗಳಲ್ಲಿ ಒಡಮೂಡಿರುವ ಕಲೆ. ಇಲ್ಲಿನ ಕಲೆಯ ಶೈಲಿ ಯಾವ ಬಗೆಯದು? ಅದರ ವೈಶಿಷ್ಟ್ಯವೇನು? ಎಂಬಿತ್ಯಾದಿ ವಿಚಾರಗಳನ್ನು 'ರಾಮನಾಥಪುರದ ದೇವಾಲಯಗಳ ವೈಶಿಷ್ಟ್ಯ' ಎಂಬ ೭ನೇ ಅಧ್ಯಾಯದಲ್ಲಿ ಚಿತ್ರಿಸಲಾಗಿದೆ.

ಇಷ್ಟೆಲ್ಲಾ ಪ್ರಾಮುಖ್ಯತೆ ಹೊಂದಿರುವ ರಾಮನಾಥಪುರದ ದೇವಾಲಯಗಳ ಉಸ್ತುವಾರಿ, ನಿರ್ಮಾಣಕ್ಕೆ ತಗುಲಿದ ವೆಚ್ಚದ ಮೂಲವನ್ನು ಹುಡುಕ ಹೊರಟಾಗ ಈ ದೇವಾಯಗಳ ಪೋಷಕರ ವಿಚಾರಗಳನ್ನು ಒಳಗೊಂಡತೆ ಸವಿಸ್ತಾರವಾದ ಮಾಹಿತಿ ದೊರೆತಿದ್ದು ಶಾಸನಗಳಿಂದ ಹಾಗಾಗಿ ೮ನೇ ಆಧ್ಯಾಯವನ್ನು ಸಂಪೂರ್ಣವಾಗಿ ಶಾಸನಗಳಿಗೆ ಮೀಸಲಿರಿಸಿ 'ಶಾಸನಗಳಲ್ಲಿ ರಾಮನಾಥಪುರ' ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನ ಮಾಡಲಾಗಿದೆ.

ಅಂತಿಮವಾಗಿ ಈ ಪ್ರಬಂಧದಲ್ಲಿ ರಾಮನಾಥಪುರ ಸಹಸ್ರಾರು ವರ್ಷಗಳಿಂದ ನಡೆಸಿಕೊಂಡು ಬಂದಿರುವ ಜಾತ್ರೆ, ಉತ್ಸವಗಳು, ದನಗಳ ಜಾತ್ರೆ ಅವುಗಳನ್ನು ಆಚರಿಸುವ ಕ್ರಮ, ಉದ್ದೇಶ, ರೀತಿ-ನೀತಿಗಳು, ವಿಶಿಷ್ಟತೆ ಈ ಎಲ್ಲಾ ವಿಚಾರಗಳನ್ನು ಒಂಭತ್ತನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

## ಭೌಗೋಳಿಕ ಪರಿಚಯ ಮತ್ತು ಸ್ಥಳನಾಮದ ವಿಶೇಷ – ೧

ರಾಮನಾಥಪುರ ಪ್ರವಾಸಿಗರ ಕಣ್ಮನ ಸೂರೆಗೊಳ್ಳಬಲ್ಲ ಸುಂದರ ತಾಣವಾಗಿ ಪ್ರವಾಸಿಗರ ಸ್ವರ್ಗ ಸೀಮೆಯಾಗಿದೆ. ಮನಮೋಹಕ ನದಿತೀರ, ಕಣ್ಮನ ಸೂರೆಗೊಳ್ಳುವ ದೇವಾಲಯಗಳು. ಕಲೆಯನ್ನು ಮರೆಸುವ ಕುಶಲವಸ್ತುಗಳು, ಆಹ್ಲಾದಕರ ವಾತಾವರಣ, ಮರೆಯಲಾಗದಂತಹ ಆತಿಥ್ಯ ನೀಡುವ ಇಲ್ಲಿನ ಜನ, ಶ್ರೀಮಂತ ಪರಂಪರೆ, ಭವ್ಯ ಇತಿಹಾಸ, ಸಂಸ್ಕೃತಿಗಳಿಂದ ಕೂಡಿದ ಈ ನಾಡು ಪ್ರವಾಸಿಗರನ್ನು ಪ್ರಾಚೀನ ಕಾಲದಿಂದಲೂ ತನ್ನತ್ತ ಕೈಬೀಸಿ ಕರೆಯುತ್ತಿದೆ. ಇಂತಹ ಐತಿಹಾಸಿಕ ಮಹತ್ವ ಪಡೆದಿರುವ ರಾಮನಾಥಪುರದ ಭೌಗೋಳಿಕ ಇತಿಹಾಸವನ್ನು ಈ ಮುಂದಿನಂತೆ ಕಾಣಬಹುದಾಗಿದೆ.

ಅಷ್ಟದಳ ಕಮಲದಂತೆ ಸುಂದರವಾಗಿ ಅರಳಿನಿಂತ ಹಾಸನ ಜಿಲ್ಲೆಯ ನಕ್ಷೆಯನ್ನು ಕಣ್ಮುಂದೆ ನಿಲ್ಲಿಸಿಕೊಂಡರೆ, ದಕ್ಷಿಣದಲ್ಲಿ ಇಡೀ ಹಾಸನ ಜಿಲ್ಲೆಯ ಎಲ್ಲಾ ಭಾರವನ್ನು ಹೊತ್ತು ನಿಂತಂತೆ ಕಾಣುವ ಚಚ್ಚೌಕದ ಆಕಾರವೇ ಅರಕಲಗೂಡು ತಾಲ್ಲೂಕು. ಸುಮಾರು ೬೨೫.೬ ಚಕಿಮೀ ವಿಸ್ತೀರ್ಣದಲ್ಲಿ ಹರಡಿಕೊಂಡಿರುವ ಸುಮಾರು ೨ ಲಕ್ಷದ ೩೦ ಸಾವಿರ ಜನಸಂಖ್ಯೆ ಹೊಂದಿರುವ ಅರಕಲಗೂಡು ತಾಲ್ಲೂಕು ಒಂದರ್ಥದಲ್ಲಿ ಹಾಸನ ಜಿಲ್ಲೆಯ ಪಂಜಾಬ್ ಅಂದರೆ –'ಅನ್ನದ ಕಣಜ' ಎಂದೇ ಪ್ರಸಿದ್ಧವಾಗಿದೆ. ಇದು ಹಾಸನ ಜಿಲ್ಲೆಗೆ ದಕ್ಷಿಣದ ಹೆಬ್ಬಾಗಿಲು. ಜನಸಾಂದ್ರತೆಯಲ್ಲಿ ಎರಡನೇ ಸ್ಥಾನ ಹೊಂದಿದ್ದು, ಸಾಕ್ಷರತೆಯಲ್ಲಿ ಮಾತ್ರ ಕೊನೆಯ ಸ್ಥಾನವನ್ನು ಹೊಂದಿರುವ ಈ ತಾಲ್ಲೂಕು ಕೃಷಿ, ಸಂಗೀತ, ಸಾಹಿತ್ಯಗಳಲ್ಲಿ ಇಡೀ ಜಿಲ್ಲೆಗೆ ಪ್ರಪ್ರಥಮ ಸ್ಥಾನ ಪಡೆದಿದೆ.

ಈ ತಾಲ್ಲೂಕಿನ ಒಂದು ಹೋಬಳಿ ಕೇಂದ್ರವೇ ಈ ರಾಮನಾಥಪುರ. ಅರಕಲಗೂಡಿನಿಂದ ದಕ್ಷಿಣಕ್ಕೆ ೩೦ ಕಿ.ಮೀ ಇರುವ ಈ ಊರು ಕೊಣನೂರಿನಿಂದ ಪೂರ್ವಕ್ಕೆ ೪ ಕಿ.ಮೀ ಇದ್ದು, ಐತಿಹಾಸಿಕ ಹಿನ್ನಲೆ ಹೊಂದಿರುವ ಸಾಲಿಗ್ರಾಮದಿಂದ ಪಶ್ಚಿಮಕ್ಕೆ ೪೦ ಕಿ.ಮೀ ದೂರದಲ್ಲಿದೆ. ಇದರ ಪೂರ್ವಕ್ಕೆ ಮೈಸೂರು ಜಿಲ್ಲೆ ಇದೆ.

ಭೌಗೋಳಿಕವಾಗಿ ಸುಂದರವಾದ ಪರಿಸರದಲ್ಲಿ ನೆಲೆ ನಿಂತಿರುವ ಈ ಊರು ಕಾವೇರಿನದಿಯ ಎಡದಂಡೆಯ ಮೇಲೆ ತನ್ನ ಐತಿಹಾಸಿಕ ಮತ್ತು ಪೌರಾಣಿಕ ಕಥೆಯನ್ನು ಹೇಳುತ್ತಾ ನಿಂತಿದೆ. ಪವಿತ್ರ ಕ್ಷೇತ್ರವಷ್ಟೇ ಅಲ್ಲ, ಪ್ರೇಕ್ಷಣೀಯ ಸ್ಥಳವೂ ಆಗಿರುವ ಈ ಊರು ೧೫೨ ಎಕರೆ ವಿಸ್ತೀರ್ಣವನ್ನು ಹೊಂದಿದ್ದು ಸುಮಾರು ೨೬೦೦ ಜನಸಂಖ್ಯೆಯನ್ನು ಹೊಂದಿದೆ.

ಕಾವೇರಿ ನದಿ ಈ ಊರಿಗೆ ಒಂದು ವರಪ್ರಸಾದವಾಗಿದೆ. ಪ್ರತಿ ತಿಂಗಳು ಹಚ್ಚ ಹಸುರಾಗಿ ಕಂಗೊಳಿಸುವ ಈ ಊರಿಗೆ ಬರಗಾಲದ ಛಾಯೆ ಅಷ್ಟಾಗಿ ಕಂಡುಬರುವುದಿಲ್ಲ. ಕಾವೇರಿ ನದಿಯಿಂದಾಗಿ ಅಲ್ಲಿನ ಬಹುತೇಕ ಜಮೀನು ಗದ್ದೆಯಾಗಿ ಪರಿವರ್ತನೆಗೊಂಡು ಹಲವರಿಗೆ ಜೀವನಾಧಾರವಾಗಿದೆ, ಅಲ್ಲಿನ ಮಣ್ಣು ಬತ್ತದ ಬೆಳೆಗೆ ಯೋಗ್ಯವಾಗಿದ್ದು ಜನರ ಪ್ರಮುಖ ಉದ್ಯೋಗ ಬತ್ತದ ಬೇಸಾಯವಾಗಿದೆ. ಕಾವೇರಿ ನದಿಯಿಂದ ನೀರನ್ನು ಕಾಲುವೆ ಮೂಲಕ ಹರಿಸಿಕೊಂಡು ವಾರ್ಷಿಕ ಎರಡು ಬೆಳೆಗಳನ್ನು ಬೆಳೆಯುತ್ತಾರೆ. ಇದರ ಜೊತೆಗೆ ರಾಗಿಯನ್ನು ಸಹ ಸಾಮಾನ್ಯವಾಗಿ ಎಲ್ಲರೂ ಬೆಳೆಯುತ್ತಾರೆ. ವಾಣಿಜ್ಯ ಬೆಳೆಯಾಗಿ ತಂಬಾಕನ್ನು ಬೆಳೆದರೆ, ಅಡಕೆ ಮತ್ತು ತೆಂಗಿನ ತೋಟಗಳನ್ನು ಕೆಲವರು ಮಾತ್ರ ಹೊಂದಿದ್ದಾರೆ. ಇಲ್ಲಿನ ಜನರ ಆದಾಯದ ಮೂಲ ತಂಬಾಕು ಬೆಳೆಯಾಗಿದೆ.

ಇನ್ನುಳಿದಂತೆ ಕೆಲ ರೈತರು ಪಂಪ್ಸೆಟ್ ಹೊಂದಿದ್ದು ವಿವಿಧ ರೀತಿಯ ತರಕಾರಿಗಳನ್ನು ಬೆಳೆಯುವುದರ ಮುಖೇನ ರಾಜ್ಯದಲ್ಲೇ ಹಾಸನ ಜಿಲ್ಲೆ ತರಕಾರಿ ಉತ್ಪಾದನೆಯಲ್ಲಿ ಪ್ರಥಮ ಸ್ಥಾನ ಪಡೆಯುವಲ್ಲಿ ಯಶಸ್ವಿಯಾಗಿದೆ.

ರಾಮನಾಥಪುರಕ್ಕೆ ಕೊಡಗು ಜಿಲ್ಲೆ ಸಮೀಪವಾಗಿರುವುದರಿಂದ ಮಳೆಗೇನೂ ಬರವಿಲ್ಲ ಅಂತೆಯೆ ಪರಿಣಾಮವಾಗಿ ಸಮಧಾತುವಿನಿಂದ ಕೂಡಿದ ವಾಯುಗುಣವನ್ನು ಕಾಣಬಹುದು. ಡಿಸೆಂಬರ್ ಜನವರಿ ತಿಂಗಳುಗಳಲ್ಲಿ ಉಷ್ಣತೆ ಹೆಚ್ಚಿದ್ದು, ಈ ಅವಧಿಯಲ್ಲಿ ಚಳಿ ಸಹ ಹೆಚ್ಚಿರುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಜುಲೈ ಮತ್ತು ಆಗಸ್ಟ್ ನಲ್ಲಿ ಉಷ್ಣತೆ ಕಡಿಮೆಯಿರುತ್ತದೆ.

ಹಾಸನ, ಮೈಸೂರು, ಮಡಿಕೇರಿ, ಹುಣಸೂರಿಗೆ ರಸ್ತೆ ಸಂಪರ್ಕ ಹೊಂದಿರುವ ರಾಮನಾಥಪುರ ಹಾಸನ ಜಿಲ್ಲೆಯೊಂದಿಗೆ ಹೆಚ್ಚಿನ ವ್ಯವಹಾರಿಕ ಸಂಪರ್ಕವನ್ನು ಹೊಂದಿದೆ. ಇಲ್ಲಿ ಅರಣ್ಯ ಅಷ್ಟೇನೂ ಕಂಡುಬರುವುದಿಲ್ಲ. ಆದರೆ ರಸ್ತೆ ಬದಿಯಲ್ಲಿ ಸಾಲುಮರಗಳನ್ನು ನಾವು

ಕಾಣಬಹುದಾಗಿದೆ. ಉಳಿದಂತೆ ಮಾವಿನಮರ, ತೇಗ, ಹಲಸಿನ ಮರ, ಹೊನ್ನೆಯ ಮರ, ಬೂರುಗದ ಮರ ಮುಂತಾದವನ್ನು ರೈತರ ಜಮೀನಿನ ಬದಿಯಲ್ಲಿ ಕಾಣಬಹುದು.

**ಸ್ಥಳ ನಾಮದ ವಿಶೇಷ:**

ಮಾನವನಿಗೆ ಪುರಾತನ ಕಾಲದಲ್ಲಿ ತಾನಿದ್ದ ಸ್ಥಳವೇ ನೆಲೆಯಾಯಿತು. ಅಲ್ಲಿ ಮನೆ, ಮಠ, ಹಟ್ಟಿಗಳನ್ನು ಕಟ್ಟಲು ಪ್ರಾರಂಭಿಸಿದ. ಮಾನವ ನಾಗರಿಕನಾದಂತೆ ಊರು ಬೆಳೆಯತೊಡಗಿತು, ತನ್ನ ಕುಟುಂಬಕ್ಕೆ ಹೆಸರನ್ನು ಇಟ್ಟುಕೊಂಡಂತೆ ಪ್ರತಿಯೊಂದು ಊರುಗಳಿಗೂ ಹೆಸರುಗಳು ಬಂದವು, ಸ್ಥಳನಾಮಗಳು ಸೃಷ್ಟಿಯಾದವು. ಹೀಗೆ ಸಾಮೂಹಿಕವಾಗಿ ಜನ ತಳವೂರಿದ ಸ್ಥಳವೇ ಊರಾಯಿತು. ಪುರಾತನ ಕಾಲದ ಮಾನವ ದೇಶ ವಿದೇಶಗಳ ಪರ್ಯಟನೆ ಮಾಡಿ ನೆಲೆನಿಂತ ನಂತರ ಅಲ್ಲಲ್ಲಿಯ ಸಂಸ್ಕೃತಿಗಳಿಗೆ ಅನುಗುಣವಾದ ಸ್ಥಳನಾಮಗಳು ಉಗಮಗೊಂಡವು. ಅಂತೆಯೆ ಸಾಮಾಜಿಕ, ರಾಜಕೀಯ, ಐತಿಹಾಸಿಕ ಹಾಗೂ ಧಾರ್ಮಿಕವಾಗಿಯು ಸ್ಥಳನಾಮಗಳು ರೂಪುಗೊಂಡಿರುವುದನ್ನು ಕಾಣುತ್ತೇವೆ.

ಸ್ಥಳನಾಮಗಳ ಹುಟ್ಟು ನಿನ್ನೆಮೊನ್ನೆಯದಲ್ಲ ಅವು ಮಾನವನಷ್ಟೆ ಹಳೆಯವು ಹಾಗು ಪುರಾತನ ಕಾಲದ ಜೀವನ ಸೃಷ್ಟಿಯ ಪಳೆಯುಳಿಕೆಗಳು. ಮಾನವನ ದೈನಂದಿನ ಬದುಕಿನಲ್ಲಿ ಬೆಳವಣಿಗೆಯಾದಂತೆಲ್ಲಾ ಸ್ಥಳನಾಮಗಳಲ್ಲೂ ಬದಲಾವಣೆಗಳಾದವು. ಭೌಗೋಳಿಕ, ಐತಿಹಾಸಿಕ, ಸಾಮಾಜಿಕ, ಧಾರ್ಮಿಕ ಮತ್ತು ಜಾನಪದೀಯ ಅಂಶಗಳ ಮೂಲಕ ಸಾಂಸ್ಕೃತಿಕ ನೆಲೆಗಟ್ಟಿನ ಮೇಲೆ ಸ್ಥಳನಾಮಗಳು ಹುಟ್ಟಿಕೊಂಡವು. ಮನುಷ್ಯ ನಾಗರಿಕನಾದಂತೆಲ್ಲಾ ಹೊಸದಾಗಿ ಊರುಗಳನ್ನು ಕಟ್ಟಿಕೊಂಡಾಗ ಅದನ್ನು ಹೊಸಹಳ್ಳಿ, ಹೊಸೂರು, ಹೊಸನಗರ ಎಂಬುದಾಗಿ ಕರೆಯುತ್ತಾ ಬಂದರು. ಹೀಗೆ ಭೌಗೋಳಿಕ, ಐತಿಹಾಸಿಕ ಹಾಗೂ ವ್ಯಕ್ತಿಗತ ಹಿನ್ನಲೆಯನ್ನೊಳಗೊಂಡಂತೆ ನಾಗರಿಕತೆಯ ಸೋಂಕಿನಡಿಯಲ್ಲಿ ಸ್ಥಳನಾಮಗಳ ವಿಕಾಸವಾಗಿರುವುದನ್ನು ಕಾಣಬಹುದು.

ರಾಮನಾಥಪುರ ಪುರಾಣದಲ್ಲಿ ವಾಸವಾಪುರಿ ಎಂದೇ ಪ್ರಸಿದ್ಧಿ ಪಡೆದಿತ್ತು. ಕೃತಯುಗದಲ್ಲಿ 'ಸಂವರ್ತಕಾಪುರಿ' ಎಂದು, ತ್ರೇತಾಯುಗದಲ್ಲಿ 'ವಾಸವಾಪುರಿ' ಹಾಗೂ ದ್ವಾಪರಯುಗದಲ್ಲಿ 'ವಹ್ನಿಕಾಪುರಿ' ಎಂಬ ಹೆಸರಿತ್ತೆಂದು ಅಲ್ಲಿನ ಸ್ಥಳೀಯ ಅರ್ಚಕರಿಂದ ತಿಳಿದುಬಂದಿದೆ.

ಈ ಕಲಿಯುಗದಲ್ಲಿ 'ರಾಮನಾಥಪುರ' ಎಂದೇ ವಿಖ್ಯಾತವಾಗಿದೆ. 'ಪಟ್ಟಾಭಿರಾಮ' ಎಂಬ ನಾಮಾಂಕಿತವುಳ್ಳ ಶ್ರೀರಾಮನ ದೇವಾಲಯ ಈ ಕ್ಷೇತ್ರದಲ್ಲಿರುವುದರಿಂದ ಹಾಗೂ ರಾಮನನ್ನು ನಾಥ ಅಥವಾ ಒಡೆಯನನ್ನಾಗಿ ಪಡೆದಿರುವುದರಿಂದ ಈ ಕ್ಷೇತ್ರಕ್ಕೆ 'ರಾಮನಾಥಪುರ' ಎಂದು ಹೆಸರು ಬಂದಿರಬಹುದು. ನದಿ ತೀರದಲ್ಲಿರುವ ಉದ್ಭವ ಲಿಂಗವನ್ನು ಶ್ರೀರಾಮ ಪೂಜಿಸಿದ್ದರಿಂದ ಆ ಲಿಂಗಕ್ಕೆ ರಾಮೇಶ್ವರ ಲಿಂಗವೆಂದೂ, ಈ ಊರಿಗೆ 'ರಾಮನಾಥಪುರ' ಎಂದೂ ಹೆಸರು ಬರಲು ಕಾರಣವಾಗಿರಬಹುದು.

ಪಿ.ಕೆ. ರಾಜಶೇಖರ್ ಅವರು ತಮ್ಮ 'ಜನಪದ ಪುರಾಣ'ದಲ್ಲಿ ಉಲ್ಲೇಖಿಸಿರುವಂತೆ ಒಂದು ಕಥೆಯಿದೆ. ರಾಮ ವನವಾಸದಲ್ಲಿದ್ದಾಗ ಅವನಿಗೆ ಮೈಯಲ್ಲೆಲ್ಲಾ ಕಜ್ಜಿ ಬಂದು ಅದು ಕೀವಾಗಿ ದುರ್ವಾಸನೆಯಿಂದ ನಾತ ಬರುತ್ತಿತ್ತು. ಆಗ ರಾಮ ಈ ಊರಿನಲ್ಲಿ ಹರಿಯುವ ಕಾವೇರಿ ನದಿಯಲ್ಲಿ ಮಿಂದು ಅಲ್ಲೇ ಇರುವ ಪಾಪನಾಶಕ ಗೋಗರ್ಭವನ್ನು ಪ್ರವೇಶಿಸಿದ್ದರಿಂದ ಕಜ್ಜಿ ವಾಸಿಯಾಯಿತೆಂದೂ ಹೀಗಾಗಿ ಈ ಊರಿಗೆ ರಾಮನಾಥಪುರ ಎಂದು ಹೆಸರು ಬಂತೆಂದೂ ಒಂದು ಐತಿಹ್ಯವಿದೆ. ದೈವೀ ಅವತಾರಗಳ ಹಿನ್ನಲೆಯಲ್ಲಿ ತಮ್ಮ ಊರಿನ ಪುರಾತನತೆಯನ್ನು ಸ್ಥಾಪಿಸಿಕೊಳ್ಳುವ ಬಗೆ ಸಾಂಸ್ಕೃತಿಕ ಉದ್ದೇಶವನ್ನು ಹೊಂದಿದೆ. ತಮ್ಮ ಊರು ಅತಿ ಪುರಾತನ ದೈವೀ ಸಂಬಂಧವುಳ್ಳದ್ದೆಂಬ ಭಾವನೆಯೇ ಸಾಂಸ್ಕೃತಿಕ ಶ್ರೇಷ್ಠತೆಯ ಕಲ್ಪನೆಯನ್ನು ಹೊಂದಿದೆ.

# ಚಾರಿತ್ರಿಕ ಹಿನ್ನೆಲೆಯಲ್ಲಿ ರಾಮನಾಥಪುರ - ೨

ಒಂದು ಪ್ರದೇಶದ ಅಧ್ಯಯನಕ್ಕೆ ಹೊರಟಾಗ ಅಲ್ಲಿನ ಚಾರಿತ್ರಿಕ ಅಂಶಗಳು ಕುತೂಹಲಭರಿತವಾಗಿದ್ದು ಸಂಬಂಧಪಟ್ಟ ವಿಷಯದ ನೈಜ ಚಿತ್ರಣವನ್ನು ತಿಳಿಯುವಲ್ಲಿ ಸಹಕಾರಿಯಾಗುತ್ತವೆ. ಅಂತೆಯೇ ರಾಮನಾಥಪುರದ ಬಗೆಗಿನ ಚಾರಿತ್ರಿಕ ಅಂಶಗಳು ಕುತೂಹಲಭರಿತವಾಗಿವೆ. ರಾಮನಾಥಪುರದ ಬಗೆಗಿನ ಹೆಚ್ಚಿನ ದಾಖಲೆಗಳು ಲಭ್ಯವಾಗಿಲ್ಲದಿದ್ದರೂ ಲಭ್ಯವಾಗಿರುವ ಶಾಸನಗಳು ಮತ್ತು ದೇವಸ್ಥಾನದ ಶೈಲಿಯ ಆಧಾರದ ಮೇಲೆ ಕೆಲವು ಐತಿಹಾಸಿಕ ಅಂಶಗಳನ್ನು ಗುರುತಿಸಬಹುದಾಗಿದೆ.

ಕ್ರಿ.ಶ. ೧ ನೇ ಶತಮಾನದಿಂದ ಕ್ರಿ.ಶ ೫ ನೇ ಶತಮಾನದವರೆಗೆ ರಾಮನಾಥಪುರ ಮಯೂರವರ್ಮನಿಂದ ಸ್ಥಾಪಿಸಲ್ಪಟ್ಟ ಪೂರ್ವ ಕದಂಬರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ. ಅನಂತರದಲ್ಲಿ ೫ನೇ ಶತಮಾನದಿಂದ ೧೧ನೇ ಶತಮಾನದವರೆಗೆ ಕನ್ನಡಿಗರಾದ ತಲಕಾಡಿನ ಗಂಗರ ಆಳ್ವಿಕೆಗೆ ರಾಮನಾಥಪುರ ಒಳಪಟ್ಟಿತ್ತು. ೧೧ನೇ ಶತಮಾನದಲ್ಲಿ ಚಾಲುಕ್ಯರ ಸಾಮಂತ ದೊರೆಗಳಾದ ಚೆಂಗಾಳ್ವ ವಂಶಸ್ಥರು ಕಾವೇರಿ ಹಾಗೂ ಹೇಮಾವತಿ ನದಿಗಳ ಮಧ್ಯಭಾಗದಲ್ಲಿ ಕಂಡುಬರುವ ರಾಮನಾಥಪುರವನ್ನು ಆಳುತ್ತಿದ್ದರೆನ್ನಲಾಗಿದೆ.

ರಾಮನಾಥಪುರ ಹೆಚ್ಚು ಪ್ರಸಿದ್ಧಿ ಪಡೆದಿದ್ದು ಹೊಯ್ಸಳ ಹಾಗೂ ವಿಜಯನಗರ ಸಾಮ್ರಾಜ್ಯಗಳ ಆಳ್ವಿಕೆಯ ಅವಧಿಯಲ್ಲಿ ಎಂಬುದು ದೊರೆತಿರುವ ಶಾಸನಗಳಿಂದ ತಿಳಿದುಬಂದಿದೆ. ಇವೆರೆಡು ಸಾಮ್ರಾಜ್ಯಗಳ ಪತನಾನಂತರ ಅಂತಿಮವಾಗಿ ಹೈದರಾಲಿ, ಟಿಪ್ಪು ಅವರ ಆಳ್ವಿಕೆಯೊಂದಿಗೆ ಮೈಸೂರಿನ ಒಡೆಯರ ಆಳ್ವಿಕೆಗೆ ಒಳಗಾಯಿತು.

ರಾಮೇಶ್ವರ ದೇವಸ್ಥಾನದ ನಕ್ಷತ್ರಾಕಾರ, ಹೊಯ್ಸಳರ ವರಾಹಾ ಲಾಂಛನವನ್ನು ಕಂಬದ ಮೇಲೆ ಕೆತ್ತಿರುವುದು ಕಂಡುಬರುತ್ತದೆ. ಇದು ಹೊಯ್ಸಳ ಸೋಮೇಶ್ವರನ ಕಾಲದ ದೇವಾಲಯವಾಗಿದ್ದು ಆತನಿಂದಲೇ ನಿರ್ಮಿಸಲ್ಪಟ್ಟಿದ್ದು ಎಂಬುದು ಅಲ್ಲಿ ದೊರೆತಿರುವ ಶಾಸನಗಳಿಂದ ತಿಳಿದು ಬರುತ್ತದೆ.

ಕ್ರಿ.ಶ. ೧೨೪೫ ರಲ್ಲಿ ಚೆಂಗಾಳ್ವ ದೊರೆ ದೇವಾಲಯಕ್ಕೆ ಮಾನೂರು ಎಂಬ ಗ್ರಾಮವನ್ನು ಉಂಬಳಿಯಾಗಿ ನೀಡಿರುವುದು ತಿಳಿದುಬಂದಿದೆ. ಹೊಯ್ಸಳರ ದೊರೆ ಸೋಮೇಶ್ವರನೇ ಈ ದೇವಾಲಯದ ಶಿವಲಿಂಗಗಳನ್ನು ಪ್ರತಿಷ್ಠಾಪಿಸಿದ್ದಾಗಿ ಹೇಳಲಾಗಿದೆ. ಈತನ ದಂಡನಾಯಕ ಬೊಮ್ಮಣ್ಣ ನಾಯಕನು ಈ ದೇವಾಲಯಕ್ಕೆ ದೇಣಿಗೆ ನೀಡಿದ್ದ. ಇದರ ಜೊತೆಗೆ ಕ್ರಿ.ಶ ೧೨೭೫ ರಲ್ಲಿ ಹೊಯ್ಸಳರ ವೀರನರಸಿಂಹ ಈ ದೇವಾಲಯವನ್ನು ಸಂದರ್ಶಿಸಿ ಹರ್ಷಗೊಂಡು ದೇವರಹಳ್ಳಿ ಗ್ರಾಮವನ್ನು ಉಂಬಳಿಯಾಗಿ ನೀಡಿದ.

ಈ ದೇವಾಲಯದ ಗರ್ಭಗುಡಿಯ ಮಹಡಿಯಲ್ಲಿ ವರಾಹ ಲಾಂಛನವನ್ನು ಕೆತ್ತಲಾಗಿದೆ. ಮಹಾದ್ವಾರದ ಮೇಲಿನ ಐದು ಅಂತಸ್ತಿನ ಗೋಪುರವನ್ನು ವಿಜಯನಗರದ ದೊರೆಗಳ ಕಾಲದಲ್ಲಿ ಕಟ್ಟಿಸಲಾಗಿದೆ. ವಿಜಯನಗರ ಸಾಮ್ರಾಜ್ಯದ ದೊರೆಯಾದ ೨ನೇ ಹರಿಹರನ ಸೇವಕನಾದ ಕರಿಯ ಮಾಯಣ್ಣ ರಾಮನಾಥಪುರದ ಗ್ರಾಮಕ್ಕೆ ಭೇಟಿನೀಡಿದ್ದನೆಂದು ಅಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ೧೭೯೧ರಲ್ಲಿ ಮೈಸೂರು ಒಡೆಯರ ಅಧೀನದಲ್ಲಿದ್ದ ಪಾಳೆಗಾರ ರಾಮರಾಯ ಈ ದೇವಾಲಯಕ್ಕೆ ಭೇಟಿನೀಡಿ 'ಶಿರದನೂರು'ಗ್ರಾಮವನ್ನು ದತ್ತಿಯಾಗಿ ನೀಡಿದ ವಿವರಗಳು ಲಭ್ಯವಾಗಿವೆ.

ಇಲ್ಲಿರುವ ಸುಬ್ರಹ್ಮಣ್ಯ ದೇವಸ್ಥಾನಕ್ಕೆ ಭೇಟಿಯಿತ್ತ ಹೊಳೆನರಸೀಪುರದ ನರಸಿಂಹನಾಯಕ ಇದಕ್ಕೆ 'ಯಕ್ಕಟ' ಎಂಬ ಗ್ರಾಮವನ್ನು ದತ್ತಿಯಾಗಿ ನೀಡಿದ ವಿವರಗಳು ಸಿಗುತ್ತವೆ. ಸುಬ್ರಹ್ಮಣ್ಯದೇವಸ್ಥಾನ ವಿಜಯನಗರಶೈಲಿಯನ್ನು ಹೋಲುತ್ತಿದ್ದು ಈ ದೇವಾಲಯದ ವಾಸ್ತುಶಿಲ್ಪದ ಲಕ್ಷಣಗಳು ಈ ದೇವಾಲಯ ೧೬ನೇ ಶತಮಾನವೆಂಬ ಊಹೆಗೆ ಆಸ್ಪದ ನೀಡಿದೆ. ಮೇಲಿನ ಎಲ್ಲಾ ಉದಾಹರಣೆಗಳನ್ನು ಅವಲೋಕಿಸುವುದಾದರೆ ರಾಮನಾಥಪುರ ಹೊಯ್ಸಳರ ಕಾಲದಿಂದಲೇ ಬೆಳಕಿಗೆ ಬಂದಿತು ಎಂಬುದು ಸ್ಪಷ್ಟವಾಗಿ ವೇದ್ಯವಾಗುತ್ತದೆ.

ಅದ್ವೈತ ಸಿದ್ಧಾಂತ ಪ್ರವರ್ತಕರಾದ ಶ್ರೀ ಆದಿಶಂಕರಚಾರ್ಯರು ಪಾಪನಾಶಕವಾದ ಅತಿಪವಿತ್ರವೆನಿಸಿದ್ದ 'ವಾಸವಪುರಿ' ಎಂದೆನಿಸಿದ ಈ ರಾಮನಾಥಪುರಕ್ಕೆ ಭೇಟಿಯಿತ್ತು ಶ್ರೀ ರಾಮೇಶ್ವರನನ್ನು ಪೂಜಿಸಿದ್ದಾರೆ. ದ್ವೈತ ಮತವನ್ನು ಸ್ಥಾಪಿಸುವ ಸಲುವಾಗಿ ಅವತರಿಸಿದ ಶ್ರೀ ಮಧ್ವಾಚಾರ್ಯರು ಹಾಗೂ ವಿಶಿಷ್ಟಾದ್ವೈತ ಮತ ಪ್ರಚಾರಕರಾದ ರಾಮಾನುಜಾಚಾರ್ಯರು ಸಹ ಈ ಸುಕ್ಷೇತ್ರಕ್ಕೆ ಯಾತ್ರಾರ್ಥಿಗಳಾಗಿ ಬಂದಿದ್ದರೆಂದು ಐತಿಹ್ಯವಿದೆ.

## ಪೌರಾಣಿಕ ಹಿನ್ನೆಲೆಯಲ್ಲಿ ರಾಮನಾಥಪುರ - ೩

ದಕ್ಷಿಣ ಭಾರತದ ಜೀವನಾಡಿಯಾಗಿ ದಕ್ಷಿಣದ ಗಂಗೆ ಎನಿಸಿಕೊಂಡು "ದಕ್ಷಿಣ ಕಾಶಿಗೆ ಇನ್ನಿಲ್ಲದ ಇಂಬುಕೊಡುವ ಕಾವೇರಿಯ ಕಥೆ ಎಷ್ಟು ವಿಶಿಷ್ಟವೋ ಪುರಾಣಗಳ ಹಿನ್ನೆಲೆಯಲ್ಲಿ ರಾಮನಾಥಪುರದ ಚರಿತ್ರೆ ಅಷ್ಟೇ ವಿಶಿಷ್ಟ ಮತ್ತು ರೋಮಾಂಚನಕಾರಿಯಾಗಿದೆ.

ಧಾರ್ಮಿಕ, ಸಾಂಸ್ಕೃತಿಕ, ಪ್ರಾಕೃತಿಕ ಹಿರಿಮೆ ಹೊತ್ತ ರಾಮನಾಥಪುರ ಪುರಾಣಗಳಲ್ಲಿ ಸಾಕಷ್ಟು ಉಲ್ಲೇಖಗೊಂಡಿರುವ ಸಂಗತಿ ದೊರೆತಿದೆ. ಯುಗಯುಗಾಂತರದ ಪೌರಾಣಿಕ ಸಂಬಂಧವನ್ನು ಹೊಂದಿರುವ ಈ ಕ್ಷೇತ್ರ ಕೃತಯುಗದಲ್ಲಿ 'ಸಂವರ್ತಕಾಪುರಿ' ಎಂದೂ, ತ್ರೇತಾಯುಗದಲ್ಲಿ 'ವಾಸವಾಪುರಿ' ಹಾಗು ದ್ವಾಪರಯುಗದಲ್ಲಿ 'ವಹ್ನಿಕಾಪುರಿ' ಎಂದೂ ಹೆಸರು ಪಡೆದಿರುವುದು ತಿಳಿದು ಬಂದಿದೆ.

ರಾಮಾಯಣದ ಕಾಲಕ್ಕೆ ಕಾವೇರಿಯ ರಾಮಸ್ವಾಮಿ ಕಣಿವೆಯ ಬಳಿ ಬಂದ ಶ್ರೀರಾಮನನ್ನು ತಮ್ಮ ಲಕ್ಷ್ಮಣ ಮುಂದೆ ಹೋಗದಂತೆ ತಡೆಯುತ್ತಾನೆ. ಆ ಕಾಲಕ್ಕೆ ರಾಮನಾಥಪುರ ದಟ್ಟಅರಣ್ಯದಿಂದ ಕೂಡಿತ್ತು ಎಂಬುದು ಲಕ್ಷ್ಮಣನ ಈ ಮುಂದಿನ ಮಾತುಗಳಿಂದ ಕಾಣಬರುತ್ತದೆ. ಇನ್ನು ಹೆಚ್ಚು ದೂರ ದಕ್ಷಿಣಕ್ಕೆ ಹೋಗಬಾರದೆಂದು ಎಚ್ಚರಿಸುವ 'ದಕ್ಷಿಣಂ ತ್ಯಜ ರಾಘವ' ಎನ್ನುವ ಉಕ್ತಿ ಪೌರಾಣಿಕ ಹಿನ್ನೆಲೆಗೊಂದು ಕನ್ನಡಿಯಂತಿದೆ.

ಪೌರಾಣಿಕವಾಗಿ ಪ್ರಸಿದ್ಧವಾಗಿರುವ ರಾಮನಾಥಪುರ ಭವಿಷ್ಯೋತ್ತರ ಪುರಾಣದಲ್ಲಿ ವಸಿಷ್ಠ ಮಹರ್ಷಿಗಳಿಂದ ಶ್ರೀರಾಮನಿಗೆ ಹೇಳಲಾದ ಸುಕ್ಷೇತ್ರದ ಮಹಿಮೆ ಭಗವದ್ಭಕ್ತರಿಗೆ ತಲುಪುವುದು ಪೌರಾಣಿಕ ಹಿನ್ನೆಲೆಗಳ ಆಧಾರದಿಂದಲೇ. ಒಂದೊಮ್ಮೆ ಎಲ್ಲವನ್ನೂ ಸುಟ್ಟು ಭಸ್ಮ ಮಾಡು ಎಂದು ಭೃಗುಮಹರ್ಷಿಗಳಿಂದ ಶಾಪಕ್ಕೊಳಗಾದ(ಸರ್ವಭಕ್ಷಕನಾಗು) ಅಗ್ನಿ ಅಪಮಾನ ತಡೆಯಲಾಗದೆ ದಕ್ಷಿಣದತ್ತ ಅರಣ್ಯದಲ್ಲಿ ಹೊರಟ. ದಂಡಕಾರಣ್ಯದಲ್ಲಿದ್ದ ಸರೋವರವೊಂದನ್ನು ಹೊಕ್ಕ ಅಗ್ನಿ ಶುಚಿರ್ಭೂತನಾಗಿ ಸ್ನಾನ ಜಪಮಾಡಿ ಶಿವನನ್ನು ಪೂಜಿಸುತ್ತಾ ಅಲ್ಲಿಯೇ ಕುಳಿತ. ಆ ಸರೋವರವೆ ಇಂದಿನ ರಾಮನಾಥಪುರದಲ್ಲಿರುವ ವಹ್ನಿಪುಷ್ಕರಣಿ ಹಾಗು ಅಲ್ಲಿದ್ದ ಶಿವಲಿಂಗವೇ ಇಂದಿನ ಚತುರ್ಯುಗ ರಾಮೇಶ್ವರ.

ಕಣ್ಮರೆಯಾದ ಅಗ್ನಿಯಿಂದ ಹವಿಸ್ಸನ್ನು ಪಡೆಯದೆ ಚಿಂತಾಕ್ರಾಂತರಾದ ದೇವತೆಗಳು ಪರಶಿವನ ಮೊರೆಹೊಕ್ಕು ತಮ್ಮ ಅಳಲನ್ನು ತೋಡಿಕೊಂಡರು. ಅಭೀಷ್ಟಸಿದ್ಧಿಗಾಗಿ ನಿಯಮ ಪುರಸ್ಸರವಾದ ಪೂಜೆಗಳಿಂದ ತೃಪ್ತಿಗೊಳ್ಳುವಂತೆ ಶಿವನಲ್ಲಿ ಪ್ರಾರ್ಥಿಸಿಕೊಂಡರು. ಸ್ವತಃ ಸ್ವಯಂಭೂ ಲಿಂಗದಲ್ಲಿಯೇ ಆ ವಹ್ನಿ(ಅಗ್ನಿ) ದೋಷರಹಿತನಾಗಿ ಒಂದಾಗುವಂತೆ ಈಶ್ವರ ಸಂಕಲ್ಪವಾಯಿತು. ಆ ನಂತರ ತನ್ನನ್ನು ಕಾಪಾಡಬೇಕೆಂದು ಸ್ಪರ್ಶಮಾತ್ರದಿಂದ ಪವಿತ್ರತೆ ಪರಿಶುದ್ಧತೆಯನ್ನಿತ್ತು ತಾನೇ ಪೂಜಿಸಿದ ಲಿಂಗದಲ್ಲಿದ್ದು ಸರ್ವಜನಕೋರಿಕೆಯನ್ನು ಈಡೇರಿಸಿ ಕೃತಾರ್ಥಗೊಳಿಸಬೇಕೆಂದು ಕೇಳಿಕೊಂಡ ಅಗ್ನಿಯ ಇಷ್ಟದಂತೆ ಶಿವ ಆ ಲಿಂಗದಲ್ಲಿದ್ದು ಸೀತಾಸಹಿತ ಶ್ರೀರಾಮನಿಂದ ಪೂಜಿತನಾಗಿ ಶ್ರೀರಾಮೇಶ್ವರನೆಂದು ಪ್ರಸಿದ್ದನಾದ. ನಾಲ್ಕೂ ಕಾಲಕ್ಕೆ ಜಗತ್ಪ್ರಸಿದ್ಧವಾಗಿ ಚತುರ್ಯುಗ ರಾಮೇಶ್ವರನೆನಿಸಿಕೊಂಡ. ಸದಾಕಾಲ ಪಕ್ಕದ ಪುಷ್ಕರಣಿಯಲ್ಲಿ ಸ್ನಾನ-ಜಪ-ತಪ ಮಾಡಿ ಸರ್ವಪಾಪ ಮುಕ್ತರನ್ನಾಗಿ ಮಾಡುತ್ತಿರಲೆಂದು ಅಗ್ನಿ ಬೇಡಿಕೊಂಡ. ಅಗಸ್ತ್ಯರ ಪತ್ನಿ ಲೋಪಮುದ್ರೆ ಕಾವೇರಿಯಾಗಿ ಇಲ್ಲಿಯೇ ಹರಿದು ಪ್ರಸಿದ್ಧವಾಗಲೆಂದು ಹರಸಿ ಶಿವ ಕಣ್ಮರೆಯಾದ. ಅಂದಿನಿಂದ ಇದು ವಹ್ನಿ ಪುಷ್ಕರಣಿ ಎಂದು ಪುಣ್ಯತೀರ್ಥವಾಗಿದೆ. ಇಲ್ಲಿಯೇ ಅನೇಕ ಜಾತಿಯ ಬಣ್ಣ ಬಣ್ಣದ ಮೀನುಗಳು ಎಷ್ಟೇ ಪ್ರವಾಹ ಬಂದರೂ ಸ್ಥಳಾಂತರಗೊಳ್ಳದೆ ಇವೆ. ರಾಮೇಶ್ವರನ ಸಾನ್ನಿಧ್ಯದಿಂದ ಈ ಕ್ಷೇತ್ರಕ್ಕೆ ರಾಮನಾಥಪುರ ಎಂದು ಹೆಸರಾಯಿತು. ಇದನ್ನು ವಾಸವಪುರಿ ಎಂತಲೂ ಕರೆಯುತ್ತಿದ್ದರು. ಭೃಗು ಮಹರ್ಷಿಗಳ ಶಾಪದಿಂದ ಶಮನಗೊಂಡು ಅಗ್ನಿ ಪೂಜಿಸಿದ ಶ್ರೀರಾಮ ಕೃತಯುಗದಲ್ಲಿ ಸಂವರ್ತಕೇಶ್ವರನಾಗಿ, ತ್ರೇತಾಯುಗದಲ್ಲಿ ವಾಸುಕೇಶ್ವರನಾಗಿ, ದ್ವಾಪರಯುಗದಲ್ಲಿ ವಹ್ನೀಶ್ವರನಾಗಿ ಈಗ ಕಲಿಯುಗದಲ್ಲಿ ರಾಮೇಶ್ವರನಾಗಿ ಶೋಭಿಸುವುದರಿಂದಲೇ ಚತುರ್ಯುಗ ರಾಮೇಶ್ವರನಾದ. ವಸಿಷ್ಠರ ಆಜ್ಞಾನುಸಾರ ರಾಮ ರಾವಣನನ್ನು ಸಂಹಾರ ಮಾಡಿ ಈ ಕ್ಷೇತ್ರದಲ್ಲಿ ಕ್ಷೇತ್ರೋಪವಾಸವನ್ನಾಚರಿಸಿ ಉದ್ಭವಲಿಂಗವನ್ನು ಪೂಜಿಸಿದನೆಂದು ಪುರಾಣವಿದೆ.

ಅಗಸ್ತ್ಯ ಮಹರ್ಷಿಗಳು ಕಾವೇರಿ ಹರಿದಿರುವ ಜಾಗದಲ್ಲಿ ಹನ್ನೆರಡು ಯೋಜನಗಳಿಗೊಂದರಂತೆ ಶಿವಲಿಂಗ ಸ್ಥಾಪಿಸಿದರು. ಇಲ್ಲಿರುವ ಲಿಂಗಕ್ಕೆ ಅಗಸ್ತ್ಯೇಶ್ವರ ಎಂಬ ಹೆಸರಿದೆ ಇದರ ಪ್ರಸ್ತಾಪ ಭವಿಷ್ಯೋತ್ತರ ಪುರಾಣದಲ್ಲಿ ವ್ಯಕ್ತವಾಗಿರುವುದನನ್ನು ಕಾಣಬಹುದು.

ಶ್ರೀಕ್ಷೇತ್ರದಲ್ಲಿರುವ ಗೌತಮಶಿಲೆಯಲ್ಲಿ ಗೌತಮ ಮಹರ್ಷಿಗಳು ತಪಸ್ಸನ್ನಾಚರಿಸಿದರೆಂದು ಅವರ ಪಾದದ ಗುರುತುಗಳು ಇದ್ದವೆಂದು ಜನ ಹೇಳುತ್ತಾರೆ. ಆದರೆ ಈ ಶಿಲೆ ಕಾರಣಾಂತರದಿಂದ ಈಗ ನೋಡಲು ಅಲಭ್ಯವಾಗಿದೆ.

ಹೀಗೆ ಯುಗಯುಗಾಂತರಗಳಿಂದ ಸಂಬಂಧ ಹೊಂದಿರುವ ಈ ಕ್ಷೇತ್ರ ಪೌರಾಣಿಕವಾಗಿ ತನ್ನದೇ ಆದ ವಿಶಿಷ್ಟತೆಯನ್ನು ಪಡೆದಿದ್ದು ಜನರಿಗೆ ಒಂದು ಪುಣ್ಯ ಸ್ಥಳವಾಗಿ ಹಿಂದಿನಿಂದಲೂ ನಡೆದುಕೊಂಡು ಬಂದಿರುವುದನ್ನು ಕಾಣಬಹುದಾಗಿದೆ.

## ಸಾಮಾಜಿಕ ಹಿನ್ನೆಲೆಯಲ್ಲಿ ರಾಮನಾಥಪುರ-೪

ರಾಮನಾಥಪುರ ಹಾಸನ ಜಿಲ್ಲೆಗೆ ಸೇರಿದ ಒಂದು ಪುಣ್ಯಕ್ಷೇತ್ರ ಹಾಗೂ ಹೋಬಳಿ ಕೇಂದ್ರ ಹಾಸನದಿಂದ ದಕ್ಷಿಣಕ್ಕೆ ೪೯.ಕಿ.ಮೀ. ದೂರದಲ್ಲಿ ಕಾವೇರಿ ನದಿಯ ಎಡದಂಡೆಯ ಮೇಲೆ ರಾರಾಜಿಸುತ್ತಿರುವ ರಾಮನಾಥಪುರದ ಜನಸಂಖ್ಯೆ ಸುಮಾರು ೩೦೦೦. ಒಂದು ಸಾಮಾಜಿಕ ವ್ಯವಸ್ಥೆ ಎಂದಮೇಲೆ ವಿವಿಧ ಜನಾಂಗಗಳ ಜನರು ವಾಸಿಸುವುದು ಸರ್ವೇಸಾಮಾನ್ಯ. ಸಂಖ್ಯೆಯಲ್ಲಿ ಒಂದು ಜನಾಂಗ ಸುಸಂಸ್ಕೃತವಾಗಿರಬಹುದು. ಮತ್ತೊಂದು ಜನಾಂಗ ಸಂಸ್ಕೃತಿಯಿಲ್ಲದವರಾಗಿರಬಹುದು. ಒಟ್ಟಾರೆ ಒಂದು ಗ್ರಾಮ ಎಂದಮೇಲೆ ಹಲವು ಜಾತಿಯ ಜನಾಂಗದವರು ವಾಸಿಸುವುದು ತಿಳಿದ ವಿಷಯ. ಈ ವಿಷಯದಲ್ಲಿ ರಾಮನಾಥಪುರ ಹೊರತಾಗಿಲ್ಲ. ಒಂದು ಕ್ಷೇತ್ರವನ್ನು ಸಾಂಸ್ಕೃತಿಕ ಅಧ್ಯಯನಕ್ಕೆ ಒಳಪಡಿಸುವಾಗ ಅಲ್ಲಿನ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಬೇಕಾದರೆ ಆ ಕ್ಷೇತ್ರದ ಸಾಮಾಜಿಕ ಅಧ್ಯಯನ ಮಾಡುವುದು ಬಹಳ ಮುಖ್ಯ. ಏಕೆಂದರೆ ಸಾಮಾಜಿಕ ವ್ಯವಸ್ಥೆಯ ಪರಿಚಯ, ಸಾಂಸ್ಕೃತಿಕ ಅಧ್ಯಯನದಲ್ಲಿ ಗಮನಾರ್ಹವಾದ ಒಂದು ಭಾಗ. ಸಾಮಾಜಿಕ ವ್ಯವಸ್ಥೆಯಲ್ಲಿ ಬರುವ ವಿಚಾರಗಳೆಲ್ಲ ಸಂಸ್ಕೃತಿಯನ್ನೆ ಅವಲಂಬಿಸುವುದರಿಂದ ಸಾಮಾಜಿಕ ಅಧ್ಯಯನ ಸಾಂಸ್ಕೃತಿಕ ಅಧ್ಯಯನಕ್ಕೆ ಬಹಳ ಪೂರಕ. ಈ ನಿಟ್ಟಿನಲ್ಲಿ ರಾಮನಾಥಪುರವನ್ನು ಸಾಮಾಜಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು ಮಹತ್ವಪೂರ್ಣವೆನಿಸಿದೆ.

**ಜಾತಿ ಪದ್ಧತಿ:-**

ರಾಮನಾಥಪುರದಲ್ಲಿ ಇರುವ ಜನಾಂಗದ ಬಗ್ಗೆ ನೋಡುವುದಾದರೆ ಇಲ್ಲಿ ಬ್ರಾಹ್ಮಣರು, ಶೆಟ್ಟರು, ಗಾಣಿಗಶೆಟ್ಟರು, ವಿಶ್ವಕರ್ಮ, ಲಿಂಗಾಯಿತ, ಒಕ್ಕಲಿಗ, ನಾಯಕ, ಗಂಗಮತದವರು ಇಲ್ಲಿ ಇದ್ದಾರೆ. ಆದರೆ ಇಲ್ಲಿ ಅಧಿಕವಾಗಿರುವವರು ಬ್ರಾಹ್ಮಣರು. ಇವರಲ್ಲಿ ಮಧ್ವಾಚಾರ್ಯರ ಅನುಯಾಯಿಗಳಾದ ಮಾಧ್ವರು. ಶಂಕರಾಚಾರ್ಯರ ಅನುಯಾಯಿಗಳಾದ ಸ್ಮಾರ್ಥರು, ರಾಮಾನುಜರ ಅನುಯಾಯಿಗಳಾದ ಶ್ರೀ ವೈಷ್ಣವರು ಇದ್ದಾರೆ. ಆದರೆ ಇವರಾರೂ ಕಷ್ಟಜೀವಿಗಳಾಗಿರದೆ.

ಬುದ್ಧಿವಂತರಾಗಿದ್ದಾರೆ. ಮಾಧವರು ಮಂಗಳೂರಿನಿಂದ ಬಂದವರಾಗಿದ್ದು ಇವರ ಮಾತೃಭಾಷೆ ತುಳು. ಆಂಧ್ರಪ್ರದೇಶ ಮೂಲದ ಸ್ಮಾರ್ಥರು ತೆಲುಗು ಭಾಷೆಯನ್ನು ಮಾತೃಭಾಷೆಯಾಗಿ ಬಳಸುತ್ತಿದ್ದಾರೆ.

ಶ್ರೀ ವೈಷ್ಣವರು ತಮಿಳರಾದರೂ ಅವರ ಭಾಷೆ ಅಚ್ಚ ತಮಿಳಾಗಿರದೆ ಕನ್ನಡ ಮಿಶ್ರಿತ ಕಂದಮಿಳ್ ಭಾಷೆಯಲ್ಲಿ ಮಾತನಾಡುತ್ತಾರೆ. ಇದಕ್ಕೆ ಇವರು ಬಹಳ ಹಿಂದೆಯೆ ಇಲ್ಲಿಗೆ ಬಂದಿರುವುದು ಕಾರಣವಾಗಿದೆ.

ಪಟ್ಟಾಭಿರಾಮ ದೇವಾಲಯವನ್ನು ಶ್ರೀ ವೈಷ್ಣವರು ಪೂಜೆ ಮಾಡುತ್ತಾರೆ. ಇಲ್ಲಿ ಭಟ್ಟರು ಪೂಜೆ ಮಾಡುತ್ತಾರೆ. ಕುಕ್ಕೆಸುಬ್ರಹ್ಮಣ್ಯ ದೇವಸ್ಥಾನದ ಅಧಿಪತ್ಯದಲ್ಲಿರುವ ಸುಬ್ರಮಣ್ಯಸ್ವಾಮಿ ದೇವಾಲಯವನ್ನು ಮಾಧವರು ಪೂಜೆ ಮಾಡುತ್ತಾರೆ. ಇನ್ನುಳಿದಂತೆ ರಾಮೇಶ್ವರ ಹಾಗು ಅಗಸ್ತ್ಯೇಶ್ವರ ದೇವಾಲಯವನ್ನು ಶಂಕರ ಮತದವರು ಅಂದರೆ ಸ್ಮಾರ್ಥರು ಪೂಜಿಸುತ್ತಾರೆ. ಈ ಊರಿನಲ್ಲಿ ದಲಿತರು ಕಂಡುಬರುವುದಿಲ್ಲ. ಇಲ್ಲಿಗೆ ಸಮೀಪವಿರುವ 'ಕೊಟ್ಟಾಲ' ಎಂಬ ಗ್ರಾಮದಲ್ಲಿ ದಲಿತರು ವಾಸವಿರುವುದನ್ನು ಗಮನಿಸಿದರೆ ಅಂದಿನ ವರ್ಣವರ್ಗ ವ್ಯವಸ್ಥೆ ಹೇಗಿತ್ತೆಂಬುದನ್ನು ಅರಿಯಬಹುದಾಗಿದೆ.

ರಾಮನಾಥಪುರದ ಇನ್ನೊಂದು ವಿಶೇಷವೆಂದರೆ ಎಲ್ಲಾ ಜನಾಂಗದವರೂ ಅನ್ಯೋನ್ಯವಾಗಿದ್ದಾರೆ. ಇಲ್ಲಿ ಒಂದೊಂದು ಜನಾಂಗದವರಿಗೆ ಒಂದೊಂದು ಬೀದಿ ಎಂದೇನಿಲ್ಲ. ಎಲ್ಲಾ ಜಾತಿಯವರ ಮನೆಗಳು ಒಂದೇ ರಸ್ತೆ ಬದಿಯಲ್ಲಿರುವುದು ವಿಶೇಷ. ಆದರೂ ಪಟ್ಟಾಭಿರಾಮ ರಥಬೀದಿಯಲ್ಲಿ ಶ್ರೀ ವೈಷ್ಣವರು ಅಧಿಕ ಸಂಖ್ಯೆಯಲ್ಲಿದ್ದಾರೆ. ಸುಬ್ರಮಣ್ಯಸ್ವಾಮಿ ರಥಬೀದಿಯಲ್ಲಿ ಎಲ್ಲಾ ಜನಾಂಗದವರು ಇದ್ದಾರೆ. ಕಸ್ತೂರಿಬಾ ರಸ್ತೆಯಲ್ಲಿ ಬ್ರಾಹ್ಮಣರನ್ನು ಹೊರತುಪಡಿಸಿ ಉಳಿದ ಜನಾಂಗದವರು ವಾಸವಾಗಿದ್ದಾರೆ.

**ಆಹಾರ ಪದ್ಧತಿ:** –

ರಾಮನಾಥಪುರದಲ್ಲಿ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರ ಆಹಾರ ಪದ್ಧತಿಗಳು ಭಿನ್ನವಾಗಿವೆ. ಬ್ರಾಹ್ಮಣ ಮತ್ತು ಲಿಂಗಾಯಿತರನ್ನು ಹೊರತುಪಡಿಸಿ ಉಳಿದೆಲ್ಲಾ ಜಾತಿಯವರು ಮಾಂಸಾಹಾರಿಗಳಾಗಿದ್ದಾರೆ. ಬ್ರಾಹ್ಮಣರು ಕೋಳಿಮೊಟ್ಟೆಯನ್ನು ಸಹ ಉಪಯೋಗಿಸುವುದಿಲ್ಲ.

ಅವರಲ್ಲಿ ಹೋಟೆಲ್‌ಗೆ ಹೋಗುವಂತಿರಲಿಲ್ಲ. ಆದರೆ ಬದಲಾವಣೆಯ ಪ್ರಕ್ರಿಯೆಯಲ್ಲಿ ಇತ್ತೀಚಿನ ದಿನಗಳಲ್ಲಿ ಬ್ರಾಹ್ಮಣರು ಹೋಟೆಲ್‌ಗಳಲ್ಲಿ ಊಟಮಾಡುತ್ತಾರೆ. ಅವರು ಸಾಮಾನ್ಯವಾಗಿ ಬಾಳೆಎಲೆ ಮತ್ತು ಮುತ್ತುಗದ ಎಲೆಯನ್ನು ಊಟಕ್ಕೆ ಬಳಸುತ್ತಾರೆ. ಏಕಾದಶಿಯಂದು ಉಪವಾಸವಿರುವುದು ವಾಡಿಕೆ. ಕೆಲವರು ಪೂರ್ತಿದಿನ ಅನ್ನಮಾತ್ರ ಊಟಮಾಡುವುದಿಲ್ಲ. ದ್ವಾದಶಿಯಂದು ಬೆಳಿಗ್ಗೆ ೮ ಗಂಟೆಗೆ ಊಟಮಾಡುವುದು ಹಿಂದಿನಿಂದ ಬೆಳೆದುಕೊಂಡು ಬಂದಿರುವ ಪದ್ಧತಿಯಾಗಿದೆ.

ಬ್ರಾಹ್ಮಣರು ಕೆಲವು ಆಹಾರಗಳನ್ನು ಸೇವಿಸುವುದಿಲ್ಲ. ಅವುಗಳನ್ನು ಎರಡು ರೀತಿಯಲ್ಲಿ ಕಾಣಬಹುದು. ವಾಸನೆ ವರ್ಜ್ಯ, ಮತ್ತೊಂದು ವರ್ಣವರ್ಜ್ಯ. ವಾಸನೆ ವರ್ಜ್ಯ ಎಂದು ಈರುಳ್ಳಿ ಹಾಗು ಬೆಳ್ಳುಳ್ಳಿಯನ್ನು ಯಾವ ಹಂತದಲ್ಲೂ ಇವರು ಸೇವಿಸದೆ ಇರುವುದು ಇವರ ಕಠಿಣ ವರ್ಜ್ಯ ಪದ್ಧತಿಗೆ ಸಾಕ್ಷಿಯಾಗಿದೆ. ವರ್ಣವರ್ಜ್ಯ ಎಂದು ಕ್ಯಾರೆಟ್, ಬೀಟ್‌ರೋಟ್, ಟಮೋಟೊಗಳು ಕೆಂಪುಬಣ್ಣದ್ದಾಗಿದ್ದು ರಕ್ತದ ಬಣ್ಣವಿದೆ ಎನ್ನುವ ಕಾರಣಕ್ಕೆ ಸೇವಿಸುವುದಿಲ್ಲ. ಇವುಗಳಿಗೆ ಬದಲಾಗಿ ಜೀರ್ಣಗತಿಗೋಸ್ಕರ ಆಹಾರದಲ್ಲಿ ಹಿಂಗನ್ನು ಬಳಸುವುದು ಸರ್ವೇಸಾಮಾನ್ಯವಾಗಿದೆ. ಬ್ರಾಹ್ಮಣರು ರಾಗಿಯನ್ನು ಉಪಯೋಗಿಸುವುದಿಲ್ಲ. ರಾಗಿಯಿಂದ ಮಾಡಿದ ಯಾವುದೇ ಆಹಾರವನ್ನು ಅವರು ಸೇವಿಸುವುದಿಲ್ಲ. ಅಂತೆಯೆ ಮಜ್ಜಿಗೆ ಇಲ್ಲದೆ ಅವರು ಊಟ ಮಾಡುವುದಿಲ್ಲ. ಅವರು ದಿನನಿತ್ಯದ ಆಹಾರಕ್ಕೆ ಅನೇಕ ರೀತಿಯ ಭಕ್ಷ್ಯ ಮಾಡಿಕೊಂಡು ವಿವಿಧ ರೀತಿಯ ತಿನಿಸುಗಳನ್ನು ಮಾಡಿಟ್ಟುಕೊಳ್ಳುತ್ತಾರೆ. ಊಟಕ್ಕೆ ಬಡಿಸುವಾಗ ಮೊದಲು ಸಿಹಿಯನ್ನು ಹಾಕುವುದಿಲ್ಲ.

ಉಳಿದಂತೆ ರಾಮಾನಾಥಪುರದಲ್ಲಿ ನೆಲೆಸಿರುವ ಎಲ್ಲಾ ಜನಾಂಗದವರು, ಲಿಂಗಾಯಿತರನ್ನು ಹೊರತುಪಡಿಸಿ ಮಾಂಸಹಾರಿಗಳು. ಇವರೆಲ್ಲಾ ಶ್ರಮಜೀವಿಗಳಾಗಿದ್ದು ವ್ಯವಸಾಯವನ್ನವಲಂಬಿಸಿದ್ದು ಮುಂಜಾನೆಯ ಉಪಹಾರಕ್ಕೆ ರೊಟ್ಟಿ, ಮಧ್ಯಾಹ್ನ ಮತ್ತು ರಾತ್ರಿ ಊಟಕ್ಕೆ ರಾಗಿಮುದ್ದೆಯನ್ನು ಹೆಚ್ಚಾಗಿ ಉಪಯೋಗಿಸುವುದನ್ನು ಕಾಣಬಹುದು.

**ಉಡುಗೆ-ತೊಡುಗೆ: -**

ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರ ಉಡುಗೆಗಳು ಬೇರೆ ಬೇರೆ ರೀತಿಯವಾಗಿವೆ. ಬ್ರಾಹ್ಮಣ ಗಂಡಸರು ಪಂಚೆ, ಶಲ್ಯ, ಧೋತಿ ಸಾಮಾನ್ಯವಾಗಿ ತೊಡುತ್ತಾರೆ. ಕಚ್ಚೆಪಂಚೆ ಕಟ್ಟುವುದು ಹೆಚ್ಚು ರೂಢಿಯಲ್ಲಿದೆ. ಹೆಚ್ಚಾಗಿ ಬಿಳಿಬಣ್ಣದ ವಸ್ತ್ರಗಳನ್ನು ಧರಿಸುವುದು ಇವರ ವಾಡಿಕೆ.

ಅದೇ ರೀತಿ ಮಹಿಳೆಯರು ಕೂಡ ಹೆಚ್ಚಾಗಿ ಸೀರೆ ಧರಿಸುತ್ತಾರೆ. ಆಧುನಿಕ ಜಗತ್ತಿನ ಸ್ಪರ್ಶ ಇವರ ಉಡುಗೆ-ತೊಡುಗೆಯ ಮೇಲೆ ಯಾವ ಪ್ರಭಾವವನ್ನೂ ಬೀರದೆ ಇರುವುದು ಆಶ್ಚರ್ಯದ ಸಂಗತಿಯಾಗಿದೆ. ಬ್ರಾಹ್ಮಣರು ಅದರಲ್ಲೂ ಹೆಚ್ಚಾಗಿ ವೈಷ್ಣವರು ನಾಮವನ್ನು ಧರಿಸುತ್ತಾರೆ. ಎಲ್ಲಾ ಬ್ರಾಹ್ಮಣರು ಜನಿವಾರವನ್ನು ಹಾಕುತ್ತಾರೆ. ಅದರಲ್ಲಿ ಬ್ರಹ್ಮಚರ್ಯದಲ್ಲಿರುವವರು ಮೂರೆಳೆಯ ಒಂದು ಜನಿವಾರ ಹಾಕುತ್ತಾರೆ. ಗೃಹಸ್ಥ ಬ್ರಾಹ್ಮಣರು ಮೂರೆಳೆಯ ಎರಡು ಜನಿವಾರ ಹಾಕುತ್ತಾರೆ. ಉಪಕರ್ಮದಂದು ಬ್ರಾಹ್ಮಣರಲ್ಲಿ ಜನಿವಾರ ಬದಲಾಯಿಸುವ ಪದ್ಧತಿ ರೂಢಿಯಿಂದ ನಡೆದು ಬಂದಿದೆ. ಸಾಮಾನ್ಯವಾಗಿ ಜುಲೈ ಅಥವಾ ಆಗಸ್ಟ್ ತಿಂಗಳಿನ ಮೊದಲ ವಾರದಲ್ಲಿ 'ಋಗ್ ಉಪಕರ್ಮ' ಆಚರಿಸುತ್ತಾರೆ. ಆ ದಿನವೆ ಜನಿವಾರ ಬದಲಾಯಿಸುವುದು, ಮಹಿಳೆಯರು ಜನಿವಾರವನ್ನು ಹಾಕುವುದಿಲ್ಲ.

ಬ್ರಾಹ್ಮಣರನ್ನು ಹೊರತು ಪಡಿಸಿ ಉಳಿದ ಜನಾಂಗದವರ ಉಡುಗೆ ತೊಡುಗೆಗಳಲ್ಲಿ ವೈಶಿಷ್ಟ್ಯವೇನೂ ಕಂಡು ಬರುವುದಿಲ್ಲ. ಆದರೆ ಇವರೆಲ್ಲಾ ವ್ಯವಸಾಯಕ್ಕೆ ಯೋಗ್ಯವಾದ ಅನುಕೂಲವಾದಂತಹ ಉಡುಗೆ ತೊಡುವುದನ್ನು ಸಾಮಾನ್ಯವಾಗಿ ಕಾಣಬಹುದು. ವಿಶೇಷ ಸಂದರ್ಭಗಳಲ್ಲಿ ಪಂಚೆ, ಶರ್ಟು, ಕೆಲವರು ಪ್ಯಾಂಟು ಧರಿಸುತ್ತಾರೆ. ಉಳಿದಂತೆ ಸ್ತ್ರೀಯರಲ್ಲಿ ಆಧುನಿಕತೆಯ ಸ್ಪರ್ಶದಿಂದ ಸೀರೆಯ ಸ್ಥಾನವನ್ನು ಚೂಡಿದಾರ್, ಮಿಡ್ಡಿ, ನೈಟಿಗಳು ಆಕ್ರಮಿಸಿರುವುದನ್ನು ಸ್ಪಷ್ಟವಾಗಿ ಕಾಣಬಹುದು.

**ಹಬ್ಬಗಳು:-**

ಹಿಂದೂಗಳಲ್ಲಿ ಹಬ್ಬಗಳಿಗೆ ತಮ್ಮದೇ ಆದ ಮಹತ್ವವಿದೆ. ಹಬ್ಬಗಳು ಸಂಸ್ಕೃತಿಯ ಪ್ರತೀಕ. ಹಬ್ಬಗಳನ್ನು ಆಚರಿಸುವುದರಿಂದ ಪರಸ್ಪರ ಸ್ನೇಹ, ಬಾಂಧವ್ಯ ಅಧಿಕವಾಗುತ್ತದೆ. ರಾಮನಾಥಪುರದಲ್ಲಿ ಶ್ರೀ ವೈಷ್ಣವರು ಕೆಲವು ಹಬ್ಬಗಳನ್ನು ಆಚರಿಸುತ್ತಾರೆ. ವರ್ಷಪೂರ್ತಿ ಈ ಕ್ಷೇತ್ರದಲ್ಲಿ ಉತ್ಸವಗಳು ಜರುಗುತ್ತವೆ. ಈ ಕ್ಷೇತ್ರದಲ್ಲಿ ವಿಶಿಷ್ಟವಾಗಿ ಆಚರಿಸುವ ಹಬ್ಬಗಳೆಂದರೆ ಷಷ್ಠಿಹಬ್ಬ. ಡಿಸೆಂಬರ್ ತಿಂಗಳಲ್ಲಿ ನಡೆಯುವ ಈ ಹಬ್ಬವನ್ನು ರಾಮನಾಥಪುರದ ಎಲ್ಲಾ ವರ್ಗದವರು ಸಂಭ್ರಮದಿಂದ ಆಚರಿಸುತ್ತಾರೆ. ರಾಮನಾಥಪುರ ಮಾತ್ರವಲ್ಲದೆ ಸುತ್ತಮುತ್ತಲ

ಗ್ರಾಮದವರೆಲ್ಲರಿಗೂ ಈ ದಿನ ವಿಶೇಷ. ಅಂದು ಸುಬ್ರಹ್ಮಣ್ಯ ಸ್ವಾಮಿಯ ರಥೋತ್ಸವ ನಡೆಯುತ್ತದೆ. ಆಗ ಒಂದು ತಿಂಗಳ ಕಾಲ ಜಾತ್ರೆ ನಡೆಯುತ್ತದೆ. ಊರಿನ ಜನರೆಲ್ಲ ತಮ್ಮ ಬಂಧು ಬಾಂಧವರಿಗೆ ಈ ಹಬ್ಬಕ್ಕೆ ಮತ್ತು ರಥೋತ್ಸವಕ್ಕೆ ಆಹ್ವಾನ ನೀಡುತ್ತಾರೆ. ತೇರೊಪ್ಪತ್ತು ಎಂದು ಸಹ ಈ ದಿನವನ್ನು ಕರೆಯುತ್ತಾರೆ. ಈ ದಿನಕ್ಕೆ ಒಂದು ತಿಂಗಳು ಸರಿಯಾಗಿ ತಿಂಗಳ ಷಷ್ಠಿ ಎಂದು ಆಚರಿಸುತ್ತಾರೆ. ಅಂದು ರಥೋತ್ಸವ ಜರುಗುತ್ತದೆ. ಅಂದು ಜಾತ್ರೆ ಕೊನೆಗೊಳ್ಳುತ್ತದೆ. ಈ ಹಬ್ಬದಿಂದ ಹೆಂಗಸರು ಪರಸ್ಪರ ತರಕಾರಿ ವಿನಿಮಯ ಮಾಡಿಕೊಳ್ಳುವ ಪದ್ಧತಿ ವಿಶೇಷವಾಗಿ ಕಂಡು ಬರುತ್ತದೆ.

**ಯುಗಾದಿ ಹಬ್ಬ:-**

ಹಿಂದೂಗಳಿಗೆ ವರ್ಷದ ಆರಂಭ ಈ ಚಾಂದ್ರಮಾನ ಯುಗಾದಿ. ಈ ಹಬ್ಬವನ್ನು ಎಲ್ಲಾ ವರ್ಗದವರು ಬಹಳ ವಿಜೃಂಭಣೆಯಿಂದ ಆಚರಿಸುವರು ಗಂಡಸರೆಲ್ಲ ಮೈಗೆ ಎಣ್ಣೆ ಹಾಕಿಕೊಂಡು ಸ್ನಾನ ಮಾಡುತ್ತಾರೆ. ಅಂದು ಸಾಮಾನ್ಯವಾಗಿ ಎಲ್ಲರೂ ಹೊಸ ಬಟ್ಟೆ ತೊಡುವುದನ್ನು ಕಾಣಬಹುದಾಗಿದೆ. ಯುಗಾದಿ ಹಬ್ಬದಂದು ಎಲ್ಲರ ಮನೆಯಲ್ಲೂ ಹೋಳಿಗೆ ಊಟ ಇರುತ್ತದೆ. ಕೆಲವರು ತಮ್ಮ ಮನೆಯಲ್ಲಿ ಮಡಿದಿರುವ ಹಿರಿಯರಿಗೆ ಎಡೆ ಹಾಕುತ್ತಾರೆ. ಅಂದು ಊರಿನ ರೈತರು ಹೊನ್ನಾರು ಕಟ್ಟುತ್ತಾರೆ. ಅಂದಿನಿಂದ ರೈತರ ಕೆಲಸ ಕಾರ್ಯಗಳು ಪ್ರಾರಂಭವಾಗುತ್ತವೆ. ಅಂದು ಎಲ್ಲರೂ ಚಂದ್ರನನ್ನು ನೋಡಲು ಪ್ರಯತ್ನಿಸುವ ದೃಶ್ಯವನ್ನು ನಾವು ಕಾಣಬಹುದು.

**ಸಂಕ್ರಾಂತಿ ಹಬ್ಬ:**

ಜನವರಿ ತಿಂಗಳಿನ ಎರಡನೇ ವಾರದಂತ್ಯದಲ್ಲಿ ಬರುವ ಈ ಹಬ್ಬ ರೈತರಿಗೆ ಸುಗ್ಗಿಯ ಹಬ್ಬವೇ ಆಗಿರುತ್ತದೆ. ರೈತರು ಅಂದು ತಮ್ಮ ಹೊಲದ ಕೆಲಸವನ್ನೆಲ್ಲಾ ಮುಗಿಸಿ ವಿಶ್ರಾಂತಿ ತೆಗೆದುಕೊಳ್ಳುವ ಹಬ್ಬ. ಹೆಣ್ಣುಮಕ್ಕಳು ಎಳ್ಳು, ಬೆಲ್ಲ, ಕಬ್ಬು, ಜೀರಿಗೆಯನ್ನು ಹೊಸಬಟ್ಟೆ ಧರಿಸಿ ಅಲಂಕಾರಗೊಂಡು ಪರಸ್ಪರ ಎಲ್ಲರ ಮನೆಗೂ ಕೊಡುವುದನ್ನು ಕಾಣುತ್ತೇವೆ. ಬ್ರಾಹ್ಮಣೇತರ ಮನೆಗಳಲ್ಲಿ ಸಂಕ್ರಾತಿ ಹಬ್ಬದ ಮೂರನೇ ದಿನ ಮಾಂಸಾಹಾರದ ಊಟವೇರ್ಪಡಿಸಿ ಮನೆಯ

ಹಿರಿಕರೊಬ್ಬರು ಊಟವನ್ನು ರಾಗಿ ಮೆದೆಯ ಬಳಿ ಕೊಂಡೊಯ್ದು ಅಲ್ಲಿ ಪೂಜೆಮಾಡಿ ಮೆದೆಗೆ ಉತ್ರಾಣಿ ಗಿಡದ ಸೊಪ್ಪನ್ನು ಸಿಕ್ಕಿಸಿ ಅಲ್ಲಿಯೇ ಊಟ ಮಾಡಿಕೊಂಡು ಬರುತ್ತಾರೆ.

**ದೀಪಾವಳ ಹಬ್ಬ:**

ಇದು ಪಟಾಕಿಯ ಹಬ್ಬವೆಂದೇ ಪ್ರಸಿದ್ದ. ಮಕ್ಕಳಿಗೆ ಹೆಚ್ಚು ಪ್ರಿಯವಾದ ಹಬ್ಬ. ದೀಪಾವಳಿ ಹಬ್ಬದಂದು ಮನೆಯ ಮುಂದೆ ಸುಂದರ ರಂಗೋಲಿ ಬಿಡಿಸಿ ಆ ರಂಗೋಲಿಯ ಮೇಲೆ ಚಂಡು ಹೂವನ್ನು ಇಡುತ್ತಾರೆ. ಅನಂತರ ಆ ಪಟಾಕಿಯ ಸದ್ದು ಕೇಳುವುದೇ ಸಂಭ್ರಮ. ಎಲ್ಲರ ಮನೆಯಲ್ಲೂ ನೂರಾರು ರೂಪಾಯಿಗಳ ಪಟಾಕಿಯನ್ನು ಸಿಡಿಸುತ್ತಾರೆ. ಬಿರುಸು ಬಾಣಗಳು ಆಕಾಶವನ್ನೆಲ್ಲ ರಂಗು ರಂಗಾಗಿಸುತ್ತವೆ. ಸಾಮಾನ್ಯವಾಗಿ ಹೊಸದಾಗಿ ಮದುವೆಯಾದ ಹೆಣ್ಣು ಈ ಹಬ್ಬಕ್ಕೆ ತವರು ಮನೆಗೆ ಬರುವುದು ರೂಢಿ. ದನಕರುಗಳಿಗೆ ಮೈ ತೊಳೆದು ಪೂಜೆ ಮಾಡಲಾಗುತ್ತದೆ. ಶ್ರೀ ವೈಷ್ಣವರಿಗೆ ಈ ಹಬ್ಬ ವಿಶೇಷವಾಗಿದ್ದು ಅಂದು ಮನೆಯಲ್ಲಿ ವಿಶೇಷವಾದ ಪೂಜಾ ಕಾರ್ಯಕ್ರಮವನ್ನು ಏರ್ಪಡಿಸಿರುತ್ತಾರೆ. ಕೆಲವರ ಮನೆಯಲ್ಲಿ ಈ ಅವಧಿಯಲ್ಲಿ ಧನಲಕ್ಷ್ಮಿ ಪೂಜೆಯನ್ನು ಇಟ್ಟುಕೊಂಡಿರುತ್ತಾರೆ.

**ಗೌರಿಗಣೇಶನ ಹಬ್ಬ:**

ಈ ಹಬ್ಬವನ್ನು ಶ್ರೀ ವೈಷ್ಣವರು ಆಚರಿಸದೆ ಇರುವುದು ಒಂದು ವಿಶೇಷ. ವೈಷ್ಣವರನ್ನು ಬಿಟ್ಟು ಉಳಿದೆಲ್ಲ ಜನಾಂಗದವರೂ ಈ ಹಬ್ಬವನ್ನು ಆಚರಿಸುತ್ತಾರೆ. ಊರಿನಲ್ಲಿ ಅಂದು ಗೌರಿಗಣೇಶನ ಪ್ರತಿಮೆಯನ್ನು ಇಟ್ಟು ಅಲಂಕಾರ ಮಾಡಿ ವಿಜೃಂಭಣೆಯಿಂದ ಪೂಜಿಸುತ್ತಾರೆ. ಕಡುಬಿನ ಊಟ ಅಂದು ವಿಶೇಷವಾಗಿ ಎಲ್ಲರ ಮನೆಯಲ್ಲಿ ಮತ್ತು ಗಣಪತಿ ದೇವಾಲಯದಲ್ಲಿ ಅಂದು ವಿಶೇಷ ಕಾರ್ಯಕ್ರಮವಿರುತ್ತದೆ. ಅಂದು ಸಹ ಹೊಸ ಮದುಮಕ್ಕಳು ತವರು ಮನೆಗೆ ಬರುವುದು ರೂಢಿ. ಗಣೇಶನನ್ನು ಭಕ್ತಿಯಿಂದ ಪೂಜಿಸಿ ಅನಂತರ ಹೊಳೆಗೆ ಬಿಡುತ್ತಾರೆ.

ಗಣೇಶನನ್ನು ಹೊಳೆಗೆ ಬಿಡುವಾಗ ತುಂಬಾ ಆಡಂಬರ ಕಂಡು ಬರುತ್ತದೆ. ಪಟಾಕಿ ರಸಸಂಜೆ ಕಾರ್ಯಕ್ರಮಗಳೊಂದಿಗೆ ಗಣೇಶನನ್ನು ವಿಸರ್ಜಿಸಲಾಗುತ್ತದೆ.

**ಶಿವರಾತ್ರಿ ಹಬ್ಬ:**

ಈ ಹಬ್ಬವನ್ನು ಸಹ ವೈಷ್ಣವರು ಆಚರಿಸುವುದಿಲ್ಲ. ಅವರು ವಿಷ್ಣು ಭಕ್ತರಾಗಿ ಶಿವನ ಹಬ್ಬವನ್ನು ಆಚರಿಸುವುದಿಲ್ಲ. ಶಿವರಾತ್ರಿಯಂದು ಅಗಸ್ತ್ಯೇಶ್ವರ ದೇವಾಲಯದಲ್ಲಿ ವಿಶೇಷ ಪೂಜಾ ಕಾರ್ಯಕ್ರಮ ಮತ್ತು ಮೂರನೇ ದಿನ ಈ ಸ್ವಾಮಿಗೆ ರಥೋತ್ಸವ ಜರುಗುತ್ತದೆ. ಶಿವರಾತ್ರಿ ಮಾಡುವ ಬ್ರಾಹ್ಮಣರು ರಾತ್ರಿಇಡೀ ವಿಶೇಷವಾದ ಪೂಜಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ.
ಇತರೆ ವರ್ಗದವರು ಸಹ ಇಡೀ ರಾತ್ರಿ ಜಾಗರಣೆ ಮಾಡುತ್ತಾ ಭಜನೆ, ಸಿನಿಮಾ ಪ್ರದರ್ಶನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ.

**ಶ್ರೀ ಕೃಷ್ಣ ಜನ್ಮಾಷ್ಟಮಿ**

ಶ್ರೀ ಕೃಷ್ಣ ಜನ್ಮಾಷ್ಟಮಿಯನ್ನು ಶ್ರೀ ವೈಷ್ಣವರು ಆಚರಿಸುತ್ತಾರೆ. ಈ ಹಬ್ಬವನ್ನು ಅವರು ಅದ್ಧೂರಿಯಾಗಿ ಆಚರಿಸುತ್ತಾರೆ. ಸುಮಾರು ೪೦ ರಿಂದ ೫೦ ರೀತಿಯ ಭಕ್ಷ್ಯಗಳನ್ನು ಮಾಡುತ್ತಾರೆ. ಕೃಷ್ಣನಿಗೆ ಪ್ರಿಯವಾದ ತಿಂಡಿಗಳನ್ನು ಅಂದು ಮನೆಯಲ್ಲಿ ಮಾಡಲಾಗುತ್ತದೆ. ಮಂಟಪವನ್ನು ಮನೆಯೊಳಗೆ ಪ್ರತಿಷ್ಠಾಪಿಸಿ ಅದರಲ್ಲಿ ಶ್ರೀ ಕೃಷ್ಣನ ವಿಗ್ರಹವನ್ನು ಇಟ್ಟು ಪೂಜೆ ಸಲ್ಲಿಸುತ್ತಾರೆ. ಹೊಸ್ತಿಲಿನಿಂದ ಮಂಟಪದವರೆಗೆ ಹೆಜ್ಜೆ ಗುರುತುಗಳನ್ನು ಹಾಕಿ ಅದರ ಮೇಲೆ ಅಕ್ಕಿಯನ್ನು ಹಾಕುತ್ತಾರೆ. ಆತ್ಮೀಯರನ್ನು ಎಲ್ಲಾ ವರ್ಗದ ಜನರನ್ನು ಕರೆದು ಊಟ ಹಾಕುತ್ತಾರೆ. 'ಹೂ ಕೊಟ್ಟು ಮುಡಿ, ಹಣ್ಣು ಹಂಚಿ ತಿನ್ನು' ಎನ್ನುವಂತೆ ದನದ ಕೊಟ್ಟಿಗೆ ಸ್ವಚ್ಛಗೊಳಿಸುವವರಿಂದ ಹಿಡಿದು ಜಾಡುಮಾಲಿಯವರೆಗೂ ಕರೆದು ತಿಂಡಿಯನ್ನು ಎಲ್ಲರಿಗೂ ಕೊಡುತ್ತಾರೆ. ಈ ಹಬ್ಬ ಸಮಾನತೆಗೆ ಪೂರಕವಾಗಿರುವಂತೆ ಕಂಡುಬರುತ್ತದೆ.

**ರಾಮನವಮಿ:**

ಶ್ರೀ ವೈಷ್ಣವರು ಪ್ರಮುಖವಾಗಿ ಆಚರಿಸುವ ಹಬ್ಬವೆಂದರೆ ರಾಮನವಮಿ. ಈ ದಿನ ಕೋಸಂಬರಿ ಹಾಗೂ ಪಾನಕ ಮಾಡುತ್ತಾರೆ. ಪೂಜೆಯಾದ ನಂತರ ಎಲ್ಲರಿಗೂ ಪಾನಕ, ಕೋಸಂಬರಿಯನ್ನು ವಿತರಿಸುತ್ತಾರೆ. ಸ್ತ್ರೀಯರು ಮಂಗಳಕರವಾದ ವಸ್ತುಗಳನ್ನು ಪರಸ್ಪರ

ಕೊಡುತ್ತಾರೆ. ರಾಮನವಮಿ ಅಂಗವಾಗಿ ಹತ್ತುದಿನಗಳ ಕಾಲ ವಿಶೇಷ ಸಂಗೀತೋತ್ಸವವನ್ನು ಸಹ ಏರ್ಪಡಿಸಲಾಗಿರುತ್ತದೆ. ಈ ಹಬ್ಬದಂದು ಪಟ್ಟಾಭಿರಾಮನಿಗೆ ವಿಶೇಷವಾದ ಪೂಜೆಯನ್ನು ಏರ್ಪಡಿಸುತ್ತಾರೆ. ಆ ದಿನ ದೀಪಾಲಂಕಾರಗಳಿಂದ ವೈಭವಯುತವಾಗಿ ಶೃಂಗಾರ ಮಾಡಲಾಗುತ್ತದೆ.

**ಬಂಡಿ ಹಬ್ಬ:**

ರಾಮನಾಥಪುರದ ಗ್ರಾಮ ದೇವತೆಯಾಗಿ ಕಾಲುವೆಯಮ್ಮನನ್ನು ಊರಿನ ಶಕ್ತಿ ದೇವತೆಯಾಗಿ ಪೂಜಿಸಲಾಗುತ್ತದೆ. ಊರಿನ ಹೊರ ಭಾಗದಲ್ಲಿ ಕಾಡಿನ ಮುಂದೆ ಈ ಗುಡಿಯಿದೆ.
ಇಲ್ಲಿಗೆ ಪ್ರಸಾದವನ್ನು ಬಂಡಿಯಲ್ಲಿ ನೈವೇದ್ಯಕ್ಕೆಂದು ತೆಗೆದುಕೊಂಡು ಹೋಗುವುದರಿಂದ ಅದಕ್ಕೆ ಬಂಡಿಹಬ್ಬ ಎಂದು ಕರೆಯಲಾಗುತ್ತದೆ.

ಸಾಮಾನ್ಯವಾಗಿ ಯುಗಾದಿ ಹಬ್ಬವಾದ ಅನಂತರದ ದಿನಗಳಲ್ಲಿ ಈ ಹಬ್ಬವನ್ನು ಆಚರಿಸುತ್ತಾರೆ. ಇದರ ವಿಶೇಷವೆಂದರೆ ಇದನ್ನು ಐದು ವರ್ಷಗಳಿಗೊಮ್ಮೆ ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ಈ ಹಬ್ಬಕ್ಕೆಂದು ತವರು ಮನೆಗೆ ಎಲ್ಲಾ ಹೆಣ್ಣುಮಕ್ಕಳು ಬರುತ್ತಾರೆ. ಈಗ ಕಾರಣಾಂತರಗಳಿಂದ ಇಪ್ಪತ್ತು ವರ್ಷಗಳ ಅನಂತರ ಈ ಹಬ್ಬವನ್ನು ಮಾಡಲಾಗಿದೆ. ಈ ಹಬ್ಬದಲ್ಲು ಯಜ್ಞ ಹೋಮಗಳಿವೆ, ಬ್ರಾಹ್ಮಣರು ಬಂದು ಪೂಜೆಯನ್ನು ಸಲ್ಲಿಸುತ್ತಾರೆ. ಕಾಲುವೆ ಅಮ್ಮನವರ ಮೂರ್ತಿಯನ್ನು ಊರಲ್ಲೆಲ್ಲಾ ಮೆರವಣಿಗೆ ಮಾಡಿ ಪೂಜೆ ಮಾಡಲಾಗುತ್ತದೆ. ಈ ಹಬ್ಬದಂದು ಮಾಂಸದೂಟ ಸಾಮಾನ್ಯವಾಗಿರುತ್ತದೆ. ಮನೆಗೊಂದು ,ಎರಡು,ಮೂರು ಹೀಗೆ ಅವರವರ ಸಾಮರ್ಥ್ಯಕ್ಕನುಗುಣವಾಗಿ ಮರಿ ಕುಯ್ದು ಹಬ್ಬವನ್ನಾಚರಿಸುತ್ತಾರೆ. ಕಾಲುವೆಯಮ್ಮ ಬಲಿ ಪ್ರಧಾನವಾದ ಶಕ್ತಿ ದೇವತೆಯಾಗಿದೆ. ಬ್ರಾಹ್ಮಣೇತರರು ವಿಜೃಂಭಣೆಯಿಂದ ಮಾಡುವ ಏಕೈಕ ಹಬ್ಬ ಇದಾಗಿದೆ.

ಹಬ್ಬದ ದಿವಸ ಐದು ಅಡಿ ಅಗಲ· ಆರು ಅಡಿ ಉದ್ದದ ಗುಂಡಿಯಲ್ಲಿ ಕೊಂಡವನ್ನು ಹೊತ್ತಿಸುತ್ತಾರೆ. ಕೆಂಪಾಗಿ ರಾಶಿ ರಾಶಿ ಕಾಣುವ ಈ ಕೆಂಡದಲ್ಲಿ ಹರಕೆ ಹೊತ್ತುಕೊಂಡಿರುವ ಜನರು ಬರಿಗಾಲಿನಲ್ಲಿ ಓಡುವುದು ನೋಡುಗರನ್ನು ಆಶ್ಚರ್ಯಕ್ಕೀಡುಮಾಡುತ್ತದೆ. ಹೀಗೆ ರಾಮನಾಥಪುರದಲ್ಲಿ ಹಲವು ಹಬ್ಬಗಳನ್ನು ಆಚರಿಸುತ್ತಾರೆ. ಎಲ್ಲಾ ಹಬ್ಬಗಳ ಹಿಂದಿನ ಆಶಯ

ಒಂದೇ ಅದು ಎಲ್ಲರನ್ನೂ ಒಂದೆಡೆ ಸೇರಿಸಿ ಅನ್ಯೋನ್ಯತೆ ಬೆಳೆಯುವಂತೆ ಮಾಡುವುದರ ಮುಖೇನ ಸಹಬಾಳ್ವೆಗೆ ನಾಂದಿ ಹಾಡುವುದು.

**ಸಂಗೀತ:**

ಸಂಗೀತ ಒಂದು ಅಮರ ಕಲೆ. ಜೀವನದ ಕತ್ತಲೆಯಲ್ಲಿ ದಾರಿ ತೋರುವ ಬೆಳದಿಂಗಳು ಬೆಂದ ನೊಂದ ಮನಸ್ಸಿಗೆ ತಂಪೆರೆವ ತಂಗಾಳಿ. ಭಗವಂತನ ಸಾಕ್ಷಾತ್ಕಾರಕ್ಕೆ ಭಕ್ತರು, ದಾಸರು, ಕಂಡಿರುವ ಒಳ್ಳೆದಾರಿ. ಜೀವನದ ಸಂಕಷ್ಟಗಳ ಸಾಗರವನ್ನು ದಾಟಿ ಸುಖ, ಸಂತೃಪ್ತಿ, ನೆಮ್ಮದಿ ಶಾಂತಿಗಳ ದಡ ಸೇರಲು ಭಗವಂತನೆ ಕರುಣಿಸಿರುವ ಪರಮೋತ್ತಮ ಸಾಧನ.
ಸಂಗೀತಾಮೃತಪಾನದಿಂದ ದಾನವರು ಮಾನವರಾಗುತ್ತಾರೆ. ಭಕ್ತರು ಭಾಗವತರಾಗಿ ಭಗವಂತನನ್ನು ಕಾಣುತ್ತಾರೆ. ಜೀವನಕ್ಕೆ ಹದತರುವ, ಮುದಕೊಡುವ ಸಂಗೀತ ಕಲೆಯ ಸೆಲೆ ಬತ್ತದೆ ಜೀವಂತವಾಗಿರಲು, ಸಂಗೀತಾರಾಧನೆ, ನಿರಂತರವಾಗಿ ನಡೆಯಲು ಸಂಗೀತೋತ್ಸವಗಳು ಜರುಗಬೇಕಾದ ಅಗತ್ಯ ಇದೆ. ಮಂಗಳದ ಹೊಂಬೆಳಕು ಬದುಕಿನಂಗಳದಲ್ಲಿ ನಲಿಯುತ್ತಾ ನವಪಲ್ಲವಿ ಹಾಡಿದರೆ ನಾಸ್ತಿಕರು ಆಸ್ತಿಕರಾಗುತ್ತಾರೆ. ಇಂತಹ ಮಹತ್ವಪೂರ್ಣ ಸಂಗೀತ ಎಲ್ಲರಿಗೂ ಎಲ್ಲಾ ಕಾಲಕ್ಕೂ ಅಗತ್ಯ ಎನ್ನುವುದು ಸೂಕ್ತ.

ಇಂತಹ ಸಂಗೀತಕ್ಕೆ ರಾಮನಾಥಪುರದಲ್ಲಿ ಪ್ರೋತ್ಸಾಹ ನೀಡಿ ಸಲಹುತ್ತಿರುವುದು ಗಮನಾರ್ಹವಾದ ಅಂಶ. ಪ್ರತಿವರ್ಷ ಶ್ರೀ ರಾಮನವಮಿಯಂದು ಸಂಗೀತೋತ್ಸವ ನಡೆಸಲಾಗುತ್ತದೆ. ದೇಶದ ವಿವಿಧ ಕಡೆಗಳಿಂದ ಪ್ರಸಿದ್ಧ ಸಂಗೀತ ಪ್ರೇಮಿಗಳು ಈ ಸಂಗೀತೋತ್ಸವಕ್ಕೆ ಒಂದು ಸಂಗೀತ ರಸಧಾರೆಯಲ್ಲಿ ಮಿಂದು ಮಡಿಯಾಗುತ್ತಾರೆ. ನಿರಂತರವಾಗಿ ಆರ್ಥಿಕ ಸಹಕಾರವನ್ನು ಕೊಟ್ಟು ಅನುಪಮ ಸಹೃದಯತೆ ತೋರುವ ಸೇವಾಕರ್ತರು ಇಲ್ಲಿದ್ದಾರೆ.

ರಾಮನಾಥಪುರದಲ್ಲಿ ೩೫ನೇ ಸಂಗೀತ ವಿದ್ವಾಂಸರ ಸಮ್ಮೇಳನ ಹಾಗೂ ಯುವ ಕಲಾವಿದರ ಸಂಗೀತ ಸಮ್ಮೇಳನ ಇಲ್ಲಿ ನಡೆದದ್ದು ಶ್ಲಾಘನೀಯ. ಕರ್ನಾಟಕ ಗಾನಕಲಾ ಪರಿಷತ್ತು ಮತ್ತು ಶ್ರೀ ರಾಮ ಸೇವಾ ಸಮಿತಿಯ ಸಹಯೋಗದಲ್ಲಿ ಸಂಗೀತೋತ್ಸವವನ್ನು ವಿಜೃಂಭಣೆಯಿಂದ ನಡೆಸಲಾಯಿತು.

ಕರ್ನಾಟಕ ಕಲಾಶ್ರೀ, ಕೆಂಪೇಗೌಡ ಪ್ರಶಸ್ತಿ, ಸಂಗೀತ ಕಲಾ ಭೂಷಣ, ಶಾಸ್ತ್ರ ಕೌಸ್ತುಭ ಮುಂತಾದ ಪ್ರಶಸ್ತಿ ಪಡೆದಿರುವ ಹೆಸರಾಂತ ಸಂಗೀತಗಾರ್ತಿ ಡಾ. ಚಿ.ಶಚಿದೇವಿ ಅವರು ಕರ್ನಾಟಕ ಗಾನಕಲಾ ಪರಿಷತ್ತಿನ ಸಂಗೀತ ಸಮ್ಮೇಳನದ ಅಧ್ಯಕ್ಷತೆ ವಹಿಸಿ 'ಗಾನ ಕಲಾ ಭೂಷಣ' ಬಿರುದು ಸ್ವೀಕರಿಸಿದರು.ಅತ್ಯುತ್ತಮ ಪಿಟೀಲು ವಾದಕ ಪ್ರಶಸ್ತಿಯನ್ನು ಪಡೆದಿರುವ ವಿದ್ವಾನ್ ಹೆಚ್.ಕೆ.ವೆಂಕಟ್ರಾಂ ಅವರು ಯುವ ಕಲಾವಿದರ ಸಂಗೀತ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿ 'ಗಾನ ಕಲಾಶ್ರೀ' ಬಿರುದನ್ನು ಸ್ವೀಕರಿಸಿದರು. ಇದೇ ಸಂಗೀತೋತ್ಸವದಲ್ಲಿ ಹಲವು ಕಲಾವಿದರಿಗೆ ಮತ್ತು ಗಣ್ಯರಿಗೆ ಸನ್ಮಾನ ಮಾಡುತ್ತಾರೆ. ಹೀಗೆ ಸದಾ ಸಂಗೀತ ಪ್ರಿಯರಾದ ಇಲ್ಲಿನ ಜನತೆ ಸಂಗೀತವನ್ನು ಏರ್ಪಡಿಸಿ ಪೋಷಿಸುವ ರೀತಿ ಎಂಥವರನ್ನೂ ಬೆರಗುಗೊಳಿಸುವಂಥದ್ದಾಗಿದೆ.

## ರಾಮನಾಥಪುರದ ಆಚರಣೆ ಮತ್ತು ಸಂಪ್ರದಾಯಗಳು – ೫

ಈ ಅಧ್ಯಾಯದಲ್ಲಿ ರಾಮನಾಥಪುರದಲ್ಲಿ ಹೆಚ್ಚಾಗಿ ನೆಲೆಸಿರುವ ಬ್ರಾಹ್ಮಣ ಜನಾಂಗದವರ ಆಚರಣೆಗಳು ಮತ್ತು ವಿಧಿ ವಿಧಾನಗಳನ್ನು ಸವಿಸ್ತಾರವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ. ಸಂಪ್ರದಾಯಗಳು ಆಚರಣೆಗಳು ಜನಾಂಗದಿಂದ ಜನಾಂಗಕ್ಕೆ ಭಿನ್ನ ಸ್ವರೂಪದ್ದಾಗಿರುತ್ತವೆ. ಹುಟ್ಟಿನಿಂದ ಸಾವಿನವರೆಗೂ ವಿಭಿನ್ನ ಸ್ವರೂಪದ ಕ್ರಿಯಾ ವಿಧಿಗಳನ್ನು ನಾವು ಗುರ್ತಿಸಬಹುದಾಗಿದೆ. ರಾಮನಾಥಪುರದಲ್ಲಿ ಬ್ರಾಹ್ಮಣರ ಆಚರಣೆಗಳು, ವಿಧಿ ವಿಧಾನಗಳು ಬೇರೆಲ್ಲ ವರ್ಗಗಳಿಗಿಂತ ಭಿನ್ನವಾಗಿರುವುದನ್ನ ಕಾಣಬಹುದಾಗಿದೆ.

**ಜನನ:–**

ಸಾಮಾನ್ಯವಾಗಿ ಅನುಭವಸ್ಥರಿಂದ ಮನೆಯಲ್ಲೇ ಹೆರಿಗೆ ಮಾಡಿಸುವ ಪದ್ಧತಿ ಈ ಹಿಂದಿನಿಂದಲೂ ನಡೆದುಕೊಂಡು ಬಂದಿತ್ತಾದರೂ ಇತ್ತೀಚಿನ ದಿನಗಳಲ್ಲಿ ಆಧುನಿಕತೆಯ ಸ್ಪರ್ಶದಿಂದ ಆಸ್ಪತ್ರೆಗೆ ಕರೆದುಕೊಂಡು ಹೋಗಿ ಅಲ್ಲಿ ಹೆರಿಗೆ ಮಾಡಿಸುವುದು ಅಭ್ಯಾಸವಾಗಿದೆ. ಮಗು ಹುಟ್ಟಿದ ನಂತರ ಗಂಡು ಮಗುವಾದರೆ ೩೦ ದಿವಸ, ಹೆಣ್ಣು ಮಗುವಾದರೆ ೪೦ ದಿವಸ ಸೂತಕ ಇದ್ದು ಯಾವುದೇ ಕಾರ್ಯ ಕೈಗೊಳ್ಳುವಂತಿಲ್ಲ. ದೇವಾಲಯಕ್ಕೆ ಹೋಗುವಂತಿಲ್ಲ. ಮಗು ಹುಟ್ಟಿದ ೧೧ನೇ ದಿನಕ್ಕೆ ಸರಿಯಾಗಿ 'ಪುಣ್ಯ' ಮಾಡಿದ ಬೇರೆ ಬ್ರಾಹ್ಮಣರಿಂದ ಮನೆಗೆ ನೀರು ಹಾಕಿಸಿ ಪುಣ್ಯವಂತರನ್ನಾಗಿ ಮಾಡಿಸಿಕೊಂಡು ಸಿಹಿ ತಿಂಡಿ ಕೊಡುವ ಪದ್ದತಿಯನ್ನು ರೂಢಿಸಿಕೊಂಡಿದ್ದಾರೆ.

ನಾಮಕರಣವನ್ನು ಐದು, ಒಂಭತ್ತು, ಹನ್ನೊಂದನೆ ತಿಂಗಳಿಗೆ ಮಾಡುತ್ತಾರೆ. ಆತನ ತಂದೆ ಮಗುವಿನ ಕಿವಿಯಲ್ಲಿ ದೇವರ ಹೆಸರು ಹೇಳುತ್ತಾರೆ. ಆ ಸಂದರ್ಭದಲ್ಲಿ ಮೂರು ಹೆಸರು ಕೂಗುತ್ತಾರೆ ಒಂದು ದೇವರ ಹೆಸರು, ಪೂರ್ವಿಕರ ಹೆಸರು ಮತ್ತು ಆ ಮಗುವಿಗೆ ಇಡುವ ಹೊಸ ಹೆಸರು. ಇದರಿಂದಾಗಿ ಇವರಿಗೆ ಯಾರನ್ನೂ ಈ ಸಂದರ್ಭದಲ್ಲಿ ಮರೆತಿಲ್ಲ ಎನ್ನುವ ಭಾವನೆ ಮೂಡುತ್ತದೆ. ಮೂರು ವರ್ಷ ಅಥವಾ ಐದು ವರ್ಷವಾದಮೇಲೆ 'ಚೌಲಾ' ಮಾಡಿಸುತ್ತಾರೆ. ಗಂಡು

ಮಗುವಾದರೆ ಈ ಆಚರಣೆವರಗೆ ತಲೆಗೂದಲನ್ನು ಕತ್ತರಿಸುವುದಿಲ್ಲ. ಈ ದಿನ ಜುಟ್ಟು ಬಿಟ್ಟು ತಲೆಕೂದಲನ್ನು ಕತ್ತರಿಸುತ್ತಾರೆ.

ಎಂಟುವರ್ಷಕ್ಕೆ ಯಜ್ಞೋಪವೀತ ಉದಕ ಶಾಂತಿ ಮಂತ್ರ ಪಠಿಸುತ್ತಾರೆ. ಅನಂತರ ೯,೧೧,೧೩ನೇ ವರ್ಷಕ್ಕೆ ನಡೆಯುವುದೇ ಉಪನಯನ. ಅಥವಾ ಬ್ರಹ್ಮೋಪದೇಶ. ಇತ್ತೀಚೆಗೆ ಮದುವೆಯ ಹಿಂದಿನ ದಿನ ಆಚರಿಸುವುದು ಹೆಚ್ಚು ರೂಢಿ ಇದಕ್ಕೆ ಅನವಶ್ಯಕ ಖರ್ಚು ತಪ್ಪಿಸುವುದೇ ಕಾರಣ. ಆತ ಬ್ರಹ್ಮಚರ್ಯವನ್ನು ಸ್ವೀಕರಿಸುತ್ತಾನೆ. ಆ ದಿನ ಗುರುಗಳು ಅಷ್ಟಾಕ್ಷರಿ ಮಂತ್ರವನ್ನು ಕಿವಿಯಲ್ಲಿ ಹೇಳುತ್ತಾರೆ. ತಂದೆ ಗಾಯಿತ್ರಿ ಮಂತ್ರವನ್ನು ಬಲಕಿವಿಯಲ್ಲಿ ಹೇಳುತ್ತಾರೆ. ಅಂದಿನಿಂದ ಬ್ರಾಹ್ಮಣರ ವಿಧಿ ವಿಧಾನಗಳಿಗೆ ಆತ ಬದ್ದನಾಗುತ್ತಾನೆ. ಜನಿವಾರ ಹಾಕಿದ ಮೇಲೆ ಬ್ರಾಹ್ಮಣರ ಎಲ್ಲಾ ಆಚರಣೆಗಳಲ್ಲೂ ಅವನು ಪಾಲ್ಗೊಳ್ಳಬಹುದು. ಅಂದಿನಿಂದ ಮೂರು ಹೊತ್ತು ಸಂಧ್ಯಾವಂದನೆ ಮಾಡಬೇಕು ಸೂರ್ಯನಿಗೆ ಅರ್ಘ್ಯ ನೀಡಬೇಕು. ಸೂರ್ಯಕಾಂತಿ ಮತ್ತು ಬೌದ್ಧಿಕ ಶಕ್ತಿ ಕೂಡುವಂಥದ್ದು ಈ ಪ್ರಕ್ರಿಯೆಯಿಂದ ಜರುಗುತ್ತದೆ ಎಂಬ ನಂಬಿಕೆ ಇದೆ.

ಹೆಣ್ಣುಮಗುವಾದರೆ ಚೌಲಾ ಉಪನಯನ ಯಾವ ಪದ್ಧತಿಯೂ ಇರುವುದಿಲ್ಲ. ಹೆಣ್ಣು ಋತುಮತಿಯಾದಾಗ ಮಡಿವಾಳ ಬಂದು ಬಟ್ಟೆ ಒಗೆದು ಬಟ್ಟೆ ಹಾಸಿ ಮೆರವಣಿಗೆಯಲ್ಲಿ ಕರೆತರಲಾಗುತ್ತದೆ. ಊರೆಲ್ಲ ಸುತ್ತುವ ಪದ್ಧತಿ ಈಗಿಲ್ಲ. ಅಂದು ಬಂಧು ಬಾಂಧವರನ್ನು ಕರೆದು ಆರತಿ ಮಾಡುತ್ತಾರೆ. ಔತಣ ವ್ಯವಸ್ಥೆ ಇರುತ್ತದೆ. ಇವರಲ್ಲಿ ಹೆಣ್ಣಿಗಿಂತ ಗಂಡಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡುವುದನ್ನು ಕಾಣುತ್ತೇವೆ.

ಗಂಡಾದರೆ ಆಚರಣೆಗಳು ಮುಂದುವರೆದುಕೊಂಡು ಹೋಗುತ್ತಾ ಇರುತ್ತವೆ. ಬ್ರಹ್ಮೋಪದೇಶವಾದಮೇಲೆ ಅಕ್ಷರಾಭ್ಯಾಸ ಮಾಡಿಸುತ್ತಾರೆ. ಅಕ್ಕಿಯಲ್ಲಿ ಶುಭಂ ಓಂಕಾರ ರೂಢಿಯಲ್ಲಿದೆ. ಹುಡುಗರು ಆಸಕ್ತಿಯಿದ್ದರೆ ಬಾಲ್ಯದಲ್ಲಿ ಸಂಸ್ಕೃತ ಕಲಿಯಬಹುದಾಗಿದೆ. ಆದರೆ ಈ ಹಿಂದೆ ಸಂಸ್ಕೃತ ಕಲಿಕೆ ಕಡ್ಡಾಯವಾಗಿತ್ತೆಂಬುದನ್ನು ನಾವಿಲ್ಲಿ ನೆನಪು ಮಾಡಿಕೊಳ್ಳಬಹುದು.

**ವಿವಾಹ ಮತ್ತು ಅನಂತರದ ಆಚರಣೆಗಳು:-**

**ವಿವಾಹ ಪದ್ಧತಿ:-**

ಮಾನವ ಸಮಾಜ ವ್ಯವಸ್ಥೆಯಲ್ಲಿ ಕುಟುಂಬ ಪ್ರಮುಖವಾದ ಒಂದು ಕನಿಷ್ಠಘಟಕ. ಅದಕ್ಕೆ ವಿವಾಹ ಎಂಬುದು ಹೆಬ್ಬಾಗಿಲು. ಕುಟುಂಬವಿರದೆ ಸಮಾಜವಿರದು, ಬಹುಮಟ್ಟಿಗೆ ಮದುವೆಯಿರದೆ ಕುಟುಂಬ ಏರ್ಪಡಲಾರದು. ಕುಟುಂಬದಲ್ಲಿ ವ್ಯಕ್ತಿಗಳ ಸಂಬಂಧ ಮುಖ್ಯವಾಗಿರುತ್ತದೆ. ಈ ದೃಷ್ಟಿಯಲ್ಲಿ ವಿವಾಹ ಒಂದು ವಿಶಿಷ್ಟ ಆಚರಣೆಯಾಗಿದೆ. ಭಾರತೀಯ ಸಮಾಜದಲ್ಲಿ ವಿವಾಹ ಅತಿ ಮಹತ್ವಪೂರ್ಣವಾದ ಸ್ಥಾನ ಪಡೆದಿದೆ. ವಿವಾಹ ಶಾಶ್ವತ ಸಂಬಂಧವಾಗಬೇಕೆಂಬ ಆಶಯದೊಂದಿಗೆ ಅದು ಪವಿತ್ರವಾದುದೆಂಬ ಭಾವನೆಯ ಹಿನ್ನೆಲೆಯಲ್ಲಿ ಅದನ್ನೊಂದು ವಿಶಿಷ್ಟ ಆಚರಣೆಯನ್ನಾಗಿ ರೂಪಿಸಿದ್ದಾರೆ.

ವಿವಾಹ ವಧೂವರ ಇಬ್ಬರ ಜೀವನದಲ್ಲಿ ಆರಂಭವಾಗುವ ಒಂದು ಹೊಸ ಅಧ್ಯಾಯ. ಎಲ್ಲೋ ಹುಟ್ಟಿ ಎಲ್ಲೋ ಬೆಳೆದು ಎಂದೋ ಒಂದು ದಿನ ಪರಸ್ಪರ ಒಂದುಗೂಡಿ ಜೀವನ ಪರ್ಯಂತ ಅವರು ಒಂದಾಗಿ ಬಾಳಬೇಕಾದರೆ ಅದಕ್ಕೆ ಧಾರ್ಮಿಕ ರಕ್ಷಣೆ, ಸಾಮಾಜಿಕ ರಕ್ಷಣೆ ಮನ್ನಣೆಗಳು ಬೇಕು. ಇದು ಧಾರ್ಮಿಕ ಹಾಗೂ ಸಾಮಾಜಿಕ ವಿಧಿವಿಧಾನಗಳಿಂದ ಸಾಧ್ಯವಾಗುತ್ತದೆ. ಆ ಮೂಲಕ ವಿವಾಹದ ಆಚರಣೆಗೆ ಒಂದು ಗೌರವ ದೊರಕುತ್ತದೆ.

ಗಂಡು ಹೆಣ್ಣು ಇಬ್ಬರಲ್ಲೂ ತಾಳ್ಮೆ, ಸಹನೆ, ಸಾಮರಸ್ಯ ,ತ್ಯಾಗಮನೋಭಾವ, ವಿಶ್ವಾಸ, ಪ್ರೀತಿ ಪ್ರೇಮಗಳು ಇರಬೇಕು ಸಮಾಜದ ಪ್ರತಿಯೊಂದು ವಿಷಯದಲ್ಲೂ ನಿಶ್ಚಿತವಾದ ಗುರಿಯಿರಬೇಕು. ಇವೆಲ್ಲವನ್ನೂ ಗಂಡು ಹೆಣ್ಣುಗಳಿಗೆ ತಿಳಿಸಿಕೊಡಲು ಎಲ್ಲಾ ವಿವಾಹಕ್ರಿಯೆಗಳು ಶ್ರಮಿಸಿವೆ. ಜೀವನದ ವಿಭಿನ್ನ ಸಮಸ್ಯೆಯ ಸುಳಿಗೆ ಸಿಕ್ಕಿದರೂ ಇಬ್ಬರೂ ಒಬ್ಬರನ್ನೊಬ್ಬರು ಬಿಡದೆ ಅರ್ಥಮಾಡಿಕೊಂಡು ಒಂದಾಗಿ ಧೃಡತೆಯಿಂದ ಬಾಳುವುದೇ ವಿವಾಹ ಪದ್ಧತಿ ಅಥವಾ ಆಚರಣೆಯ ಉದಾತ್ತ ಗುರಿಯಾಗಿದೆ. ಆಯಾ ಸಂಸ್ಕೃತಿಗನುಣವಾಗಿ ವಿವಾಹದ ಆಚರಣೆ, ಕುಟುಂಬ ವ್ಯವಸ್ಥೆ

ಕುಟುಂಬ ವ್ಯವಸ್ಥೆಗನುಗುಣವಾಗಿ ವಿವಾಹದ ಆಚರಣೆಗಳು, ವಿಧಾನಗಳಲ್ಲಿ ವೈವಿಧ್ಯತೆಯಿದೆ. ವಿವಿಧ ಸಂಪ್ರದಾಯಗಳಿಗನುಗುಣವಾಗಿ, ವೈವಾಹಿಕ ಆಚರಣೆಗಳು ಭಿನ್ನವಾಗಿವೆ ಆದರೆ ಅವೆಲ್ಲವುಗಳ ಸಾರ, ತತ್ವ ಒಂದೇ. ಪ್ರಸ್ತುತ ಈ ವಿವಾಹ ಆಚರಣೆಗಳು ಅವುಗಳ ಹಿಂದಿರುವ ನಿರ್ದಿಷ್ಟ ಉದ್ದೇಶ ಅರ್ಥಗಳನ್ನು ತಿಳಿಯುವ ಪ್ರಯತ್ನ ಇಲ್ಲಿಯದು.

ವಿವಾಹ ಆಚರಣೆಗಳು ದೀರ್ಘವಾಗಿದ್ದರೂ ಅದರ ಹಿಂದೆ ಮಹತ್ತರವಾದ ಆಶಯಗಳೂ ಇವೆ ಈ ಎಲ್ಲಾ ಆಶಯಗಳನ್ನೂ ಅರಿತು ಅದನ್ನು ಆಚರಿಸಿದಾಗ ಅವು ಸುದೀರ್ಘವಾಗಿದ್ದರೂ ಅರ್ಥವತ್ತಾಗಿವೆ ಎಂದೆನಿಸುತ್ತವೆ. ಹಿಂದೆ ಈ ಮದುವೆಯ ಆಚರಣೆಗಳು ೭, ೫, ೩ ದಿನಗಳಿಗೂ ಹೆಚ್ಚುಕಾಲ ನಡೆಯುತ್ತಿದ್ದವು. ಆದರೆ ಎಲ್ಲಾ ಆಚರಣೆಗಳು ಕೇವಲ ಒಂದು ದಿನದಲ್ಲೇ ಮುಗಿದು ಹೋಗುವಂತಹ ಸರಳ ಆಚರಣೆಗಳಾಗಿವೆ. ಕಾಲಕ್ಕನುಗುಣವಾಗಿ ಸಮಾಜದ ಸ್ಥಿತಿಗತಿಗಳು ಬದಲಾದಂತೆಲ್ಲಾ ಆಚರಣೆಗಳಲ್ಲಿಯೂ ಬದಲಾವಣೆಗಳಾಗುವುದು ಸಹಜ ಅವುಗಳನ್ನು ಈ ಮುಂದಿನಂತೆ ಕಾಣಬಹುದು.

**ಮದುವೆ ಶಾಸ್ತ್ರ:-**

ವಿವಾಹದ ಹಿಂದಿನ ದಿನದಿಂದಲೇ ಮಂಗಳಕಾರ್ಯಗಳು ಅರಂಭವಾಗುತ್ತವೆ. ಆ ದಿನಬೆಳಿಗ್ಗೆ 'ಮದುವೆ ಶಾಸ್ತ್ರ'ವನ್ನು ಮಾಡುತ್ತಾರೆ. ಮದುವೆ ಕಾರ್ಯಗಳು ಆರಂಭವಾಗುವುದು ಎಣ್ಣೆಶಾಸ್ತ್ರದಿಂದ. ಈ ಎಣ್ಣೆಶಾಸ್ತ್ರವನ್ನು ಗಂಡಿನ ಕಡೆಯವರು ಹೆಣ್ಣಿನ ಕಡೆಯವರು ಇಬ್ಬರೂ ಮಾಡುವುದುಂಟು. ಶುದ್ಧತೆಗೆ ಹಾಗೂ ಮನಸ್ಸಿನ ಉತ್ಸಾಹಕ್ಕೆಂದು ಇವನ್ನು ಆಚರಿಸಲಾಗುತ್ತದೆ. ಶುಭಕಾರ್ಯಗಳೆಲ್ಲಾ ಸಾಂಗವಾಗಲು ಬಹಿರಂಗ ಶುದ್ಧಿ, ಅಂತರಂಗಶುದ್ದಿಗಳು ಅನಿವಾರ್ಯ. ಇಲ್ಲಿ ಅರಿಶಿನವನ್ನು ಬಳಸುತ್ತಾರೆ. ಅರಿಶಿನಕ್ಕೆ ರೋಗನಿರೋದಕಶಕ್ತಿ ಇರುವುದರಿಂದ ಅದರ ಬಳಕೆ ಮುಖ್ಯ. ಅಂದು ವಧು ಹಾಗೂ ವಧುವಿನ ತಂದೆ,ತಾಯಿ ಅಥವಾ ವರ ಹಾಗೂ ಆತನ ತಂದೆ ತಾಯಿಯರನ್ನು ಹಸೆಮಣೆಯಲ್ಲಿ ಕುಳ್ಳಿರಿಸಿ,ಅರಿಶಿನ, ಅರಿಶಿನ ಮಿಶ್ರಿತ ಎಣ್ಣೆಯನ್ನು ಅಡಿಯಿಂದ ಮುಡಿಯವರೆಗೂ ಸವರುವ ದ್ಯೋತಕವಾಗಿ ತಲೆಗೂ, ಕೈಕಾಲಿಗೂ ಗರಿಕೆಯಿಂದ ಸವರುತ್ತಾರೆ ಮನದಲ್ಲಿ ಆನಂದ ಅರಳಲೆಂದು ಕೆನ್ನೆಗೂ ಅರಿಶಿನವನ್ನು ಮುತ್ತೈದೆಯರು ಹಚ್ಚುತ್ತಾರೆ. ಒಟ್ಟಿನಲ್ಲಿ ಎಣ್ಣೆಶಾಸ್ತ್ರ

ಅಂತರಂಗ ಬಹಿರಂಗ ಶುದ್ಧಿಗಳ ಪ್ರತೀಕವಾಗಿ ಶುಭಕಾರ್ಯದಿಂದ ಆನಂದ ಅರಳಲೆಂಬುದರ ಆಶಯವಾಗಿ ನಡೆಯುತ್ತದೆ.

ಎಣ್ಣೆಶಾಸ್ತ್ರದ ಅನಂತರ ಮಂಗಳ ಸ್ನಾನವಾಗುತ್ತದೆ. ಅನಂತರ ನಾಂದಿಯನ್ನು ಮಾಡುತ್ತಾರೆ. ನಾಂದಿಹೋಮದಲ್ಲಿ ಆರಂಭದ ಪೂಜೆ ಗಣಪತಿಗೆ ಸಲ್ಲುತ್ತದೆ. ಅನಂತರ ಮನೆ ದೇವರು ಇಷ್ಟದೇವರುಗಳನ್ನು ಪೂಜಿಸಿ ಅಗ್ನಿದೇವನ ಮೂಲಕ ಅವರಿಗೆ ಹವಿಸ್ಸನ್ನು ಸಮರ್ಪಿಸುತ್ತಾರೆ. ಮುಂದೆ ನಡೆಯುವ ವಿವಾಹದ ಮಂಗಳ ಕಾರ್ಯಕ್ಕೆ ದೇವತೆಗಳ ಹರಕೆ ದೊರೆಯಲಿ ಎಂಬ ಆಶಯದೊಂದಿಗೆ ಈ ನಾಂದಿ ಕಾರ್ಯ ಸಮಾಪ್ತಿಯಾಗುತ್ತದೆ. ನಾಂದಿಯ ಅನಂತರ ಪಾದಪೂಜೆಯನ್ನು ನಡೆಸುವರು ಅಂದರೆ ಹಿರಿಯರನ್ನು ಪೂಜಿಸಿ ಅವರ ಆಶೀರ್ವಾದವನ್ನು ಪಡೆದು ಅವರಿಗೆ ಉಡುಗೊರೆಗಳನ್ನು ನೀಡಿ ಸತ್ಕರಿಸುವುದು. ಇದಾದ ಮೇಲೆ ಹೂ ವೀಳ್ಯ ಸುಮಂಗಲಿ ಪೂಜೆ ನಡೆಯುತ್ತದೆ. ಅಂದರೆ ೫ ಜನ ಮುತ್ತೈದೆಯರಿಗೆ ೫ ಬಗೆಯ ಹಣ್ಣುಗಳು,ಅರಿಶಿನ,ಕುಂಕುಮ ಪಾನಕವನ್ನು ಕೊಟ್ಟು ಅವರ ಆಶೀರ್ವಾದವನ್ನು ಪಡೆಯುತ್ತಾರೆ. ಅನಂತರ ಮದುವೆಯಾಗುತ್ತಿರುವ ಹುಡುಗಿಗೆ ಅರಿಶಿನ ಕುಂಕುಮವನ್ನು ನೀಡಲಾಗುತ್ತದೆ. ಆಕೆಗೆ ಬಳೆ ತೊಡಿಸಿ ಕಾಲುಂಗುರ ತೊಡಿಸುತ್ತಾರೆ. ಈ ಸಂದರ್ಭದಲ್ಲಿ ವಧುವಿಗೆ ತವರುಮನೆ ತಾಳಿಯನ್ನೂ ಕೊಡಲಾಗುತ್ತದೆ.

ಮದುವೆ ಶಾಸ್ತ್ರವಾದ ಮೇಲೆ ಆ ದಿನ ಸಂಜೆ ವರ ಪೂಜೆಯ ಕಾರ್ಯಕ್ರಮ ನಡೆಯುತ್ತದೆ ಅಂದರೆ ಮದುವೆಯಾಗಲು ಬರುವಂತಹ ವರನನ್ನು ಹಾಗೂ ಆತನ ಬಂಧು ಬಾಂಧವರನ್ನು ವಧುವಿನ ಕಡೆಯವರು ಆದರದಿಂದ ಸಂಭ್ರಮದಿಂದ, ಎದುರುಗೊಂಡು ಸ್ವಾಗತಿಸುವಂತಹ ಕಾರ್ಯಕ್ರಮ ಇದಾಗಿದೆ. ಆದರೆ ಇದು ಎಷ್ಟರಮಟ್ಟಿಗೆ ಅರ್ಥವತ್ತಾಗಿ ಆಚರಣೆಯಲ್ಲಿದೆ ಅಥವಾ ಸಾಂಕೇತಿಕವಾಗಿದೆಯೇ ಎಂದು ತಿಳಿಯುವುದು ಸಹ ಮುಖ್ಯವಾಗುತ್ತದೆ.

**ವರ ಪೂಜೆ**:-

ವರಪೂಜೆಯ ಸಮಾರಂಭ ಇಂದು ಕೇವಲ ಅದ್ದೂರಿಯಾದ ಸಮಾರಂಭವಾಗಿ ಮಾತ್ರ ಆಚರಣೆಯಲ್ಲಿದೆ. ಆದರೆ ಅದನ್ನು ಆಚರಿಸುವ ಉದ್ದೇಶವನ್ನು ಅರಿತು ಆಚರಿಸಿದರೆ ಆಡಂಬರದ

ಅವಶ್ಯಕತೆ ಇಲ್ಲವೆನಿಸುತ್ತದೆ. ದೂರ ದೂರದ ಊರುಗಳಿಂದ ಬಂಧು ಬಾಂಧವರು ಬಂದಿರುವರು. ಹೀಗಾಗಿ ಸಂತೋಷದ ಸಮಾರಂಭ ನಡೆಯಲಿ ಎಂಬ ಉದ್ದೇಶದಿಂದ ಈ ಸಮಾರಂಭವನ್ನು

ನಡೆಸಲಾಗುತ್ತದೆ. ಕನ್ಯೆಯನ್ನು ಸ್ವೀಕರಿಸಲು ಬಂದಂತಹ ವರನನ್ನು ದೇವತಾ

ಸ್ವರೂಪಿಯೆಂದು ಭಾವಿಸಿ ಗೌರವಿಸುವುದು ಇಲ್ಲಿನ ಮುಖ್ಯ ಭಾವನೆ ಬಂದ ವರನಿಗೆ ಕೈಕಾಲು ತೊಳೆಯಲು ಅರ್ಘ್ಯ ಪಾದ್ಯಗಳನ್ನು ನೀಡಿ ಆರತಿಯನ್ನು ಮಾಡಿ ಆದರಿಸಲಾಗುತ್ತದೆ. ಅಲ್ಲದೆ ವರನ ಕಡೆಯವರೆಲ್ಲರಿಗೂ ಹಾರವನ್ನು ಹಾಕಿ ಬರಮಾಡಿಕೊಳ್ಳುತ್ತಾರೆ. ಇಲ್ಲಿ ಹಾರ ಹಾಕಿ ಸ್ವಾಗತಿಸುವುದು ಒಂದು ಸಂಪ್ರದಾಯವೆಂದು ಪಾಲಿಸುವುದಿಲ್ಲ. ಬದಲಿಗೆ ಪರಸ್ಪರ ಪ್ರೀತಿ ಆದರಗಳು ಮುಖ್ಯವಾಗುತ್ತವೆ. ಇದೇ ಸಂದರ್ಭದಲ್ಲಿ ವರನನ್ನು ಕಾಲು ತೊಳೆದು ಬರಮಾಡಿಕೊಳ್ಳುತ್ತಾರೆ. ಇದು ಹಿಂದಿನಿಂದ ಬಂದಿದ್ದು ಈಗಲೂ ಆಚರಿಸುತ್ತಾರೆ. ಆದರೆ ಹೀಗೆ ಕಾಲು ತೊಳೆಯುವುದು ಎಷ್ಟರಮಟ್ಟಿಗೆ ಸೂಕ್ತವೆಂಬುದು ಪ್ರಶ್ನೆ. ವರನನ್ನು ಕುಶಲೋಪಚಾರ ಕೇಳಿ ಅತಿಥಿಗಳಂತೆ ಸತ್ಕರಿಸುವುದು ಸೂಕ್ತ. ಹೀಗೆ ವರನ ಕಾಲು ತೊಳೆಯುವುದು ಅವರವರ ಮನೊಭಾವಕ್ಕೆ ಸಂಬಂಧಿಸಿದಂತಹ ವಿಷಯ.

**ಮಧುಪರ್ಕ**:-

ವರಪೂಜೆಯ ದಿನದಲ್ಲಿ ಮಾಡುವ ಮತ್ತೊಂದು ಅರ್ಥವತ್ತಾದ ಆಚರಣೆ ಮಧುಪರ್ಕ. ಇದನ್ನು ದೂರದೂರಿಂದ ಬಂದಂತಹ ವರನ ಆಯಾಸ ಪರಿಹಾರಕ್ಕಾಗಿ ಮಾಡುತ್ತಾರೆ ವಧುವಿನ ತಂದೆ ಜೇನುತುಪ್ಪ ಮೊಸರುಗಳನ್ನು ಒಂದು ಪಾತ್ರೆಯಲ್ಲಿ ಸೇರಿಸಿ ಕಂಚಿನ ಪಾತ್ರೆ ಯಿಂದ ಮುಚ್ಚಿ ವರನಿಗೆ ನೀಡುತ್ತಾರೆ. ಇದನ್ನು ಮಧುಪರ್ಕ ಎನ್ನುತ್ತಾರೆ. ಇಲ್ಲಿ ಮಧುಪರ್ಕವನ್ನು ನೀಡುವಾಗ ಜೇನುತುಪ್ಪ-ಮೊಸರನ್ನು ವರನ ಆಯಾಸ ಪರಿಹಾರಕ್ಕೆಂದು ನೀಡಲಾಗುವುದು. ಈ ಮಧುಪರ್ಕದ ಆಚರಣೆಯನ್ನು ಅವರವರ ಇಚ್ಛೆಗೆ ಅನುಗುಣವಾಗಿ ಕೆಲವರು ಮಾತ್ರ ಆಚರಿಸುತ್ತಾರೆ. ಹೀಗೆ ವರನನ್ನು ಸ್ವಾಗತಿಸಿದ ಅನಂತರ ಅವನನ್ನು ಹಸೆಮಣೆಯ ಮೇಲೆ ಕುಳ್ಳಿರಿಸಿ ಅವನಿಗೆ ವಧುವಿನ ಕಡೆಯವರು ವಸ್ತ್ರಗಳು ವಿವಿಧ ಉಡುಗೊರೆಗಳನ್ನು ನೀಡುವುದುಂಟು. ಅಂತೆಯೇ ವಧುವನ್ನು ಹಸೆಮಣೆಯ ಮೇಲೆ ಕೂರಿಸಿ, ವರನ ಕಡೆಯವರು ಉಡುಗೊರೆಗಳನ್ನು ನೀಡುತ್ತಾರೆ. ಈ

ಆಚರಣೆಗಳು ಅವರವರ ಇಚ್ಛೆಗೆ ಸಂಬಂಧಿಸಿದವು. ಆದರೆ ಕೆಲವರು ಇವನ್ನು ಸಂಪ್ರದಾಯವೆಂಬಂತೆ ಆಚರಿಸುವುದೂ ಉಂಟು. ಇನ್ನು ಕೆಲವೆಡೆ ಇವನ್ನು ಅದ್ದೂರಿ ಆಡಂಬರದ ಆಚರಣೆಯನ್ನಾಗಿ ಆಚರಿಸುವುದು ನಡೆಯುತ್ತಿದೆ. ಆದರೆ ಈ ಆಡಂಬರಗಳನ್ನು ಕೈಬಿಟ್ಟು ಸರಳವಾಗಿ ಆಚರಿಸಬೇಕೆಂಬುದು ಹಲವು ಹಿರಿಯರ ಅಭಿಪ್ರಾಯ.

**ಕೊಬ್ಬರಿ ಬಟ್ಟಲು :-**

ವರಪೂಜೆಯ ದಿನದಂತೆ ಕೊಬ್ಬರಿ ಬಟ್ಟಲು ನೀಡುವಂತಹ ಒಂದು ಆಚರಣೆಯೂ ಇದೆ. ವಧುವಿನ ಕಡೆಯವರು ವರನಕಡೆಯ ದಂಪತಿಗಳಿಗೆ ನೀಡುವಂಥದ್ದು. ಇಲ್ಲಿ ಕೊಬ್ಬರಿ ಬಟ್ಟಲು ಎಂದರೆ ಕೊಬ್ಬರಿ ಸಕ್ಕರೆಯನ್ನು ನೀಡುವುದು ಸಿಹಿಯ ಸಂಕೇತ. ಸಿಹಿಯನ್ನು ಪಡೆವ ದಂಪತಿಗಳು ಮುಂದೆ ದಂಪತಿಗಳಾಗುವವರನ್ನು ಹರಸಲಿ ಎಂಬುದು ಉದ್ದೇಶ. ಹಿಂದೆ ಕೊಬ್ಬರಿ ಸಕ್ಕರೆ ನೀಡಲು ಸಾದನ ಇಲ್ಲದಿದ್ದಾಗ ಕೊಬ್ಬರಿಯಲ್ಲಿ ಅದನ್ನು ಹಾಕಿಕೊಡುತ್ತಿದ್ದರಂತೆ. ಅದನ್ನೆ ಕೊಬ್ಬರಿಬಟ್ಟಲು ಎನ್ನುವರು. ಇದನ್ನು ನೀಡುವ ಆಶಯ ಆದರ್ಶ ರೀತಿಯಲ್ಲಿದೆ.

**ಗೋದಮಕಲ್ಲು:-**

ಇನ್ನೂ ಕೆಲವುಕಡೆ 'ಗೋದಮಕಲ್ಲು' ಎಂಬ ಸಮಾರಂಭವನ್ನು ಆಚರಿಸುವುದುಂಟು. ಹಿಂದಿನ ಕಾಲದಲ್ಲಿ ಮದುವೆಗಾಗಿ ಹಪ್ಪಳ ಸಂಡಿಗೆ ಮಾಡಲು ಮದುವೆಗೆ ತಿಂಗಳ ಮುಂಚೆಯೇ ಅಕ್ಕಿಹಿಟ್ಟು. ಉದ್ದಿನಹಿಟ್ಟನ್ನು ಒರಳಿನಲ್ಲಿ ಕುಟ್ಟುತ್ತಿದ್ದರು. ಶುಭಕಾರ್ಯವಾದ್ದರಿಂದ ಅದಕ್ಕೆ ಮುಂಚೆ ಗಣಪತಿ ಪೂಜೆಯನ್ನು ಮಾಡುತ್ತಿದ್ದರು. ಆಗ ಉದ್ದೇಶ ಅರ್ಥವಾಗುತ್ತಿತ್ತು. ಆದರೆ ಇಂದು ಕೇವಲ ಒಂದು ಆಚರಣೆಯೆಂಬಂತೆ ಇದನ್ನು ಆಚರಿಸುತ್ತಾರೆ. ಒಟ್ಟನಲ್ಲಿ ವರಪೂಜೆಯು ಬಂಧುಮಿತ್ರರು ಸೇರಿ ಆನಂದಿಸುವಂತಹ ಆಚರಣೆಗಳನ್ನು ಒಳಗೊಂಡಿದೆ. ಪೂಜೆ ನಂತರ ಸಿಹಿ ಭೋಜನದೊಂದಿಗೆ ಆ ದಿನದ ಕಾರ್ಯಕ್ರಮಗಳು ಮುಗಿಯುತ್ತವೆ. ವಿವಾಹದ ಕಾರ್ಯಕ್ರಮಗಳು ಜರುಗುವುದು ಮಾರನೆಯದಿನ ಅಂದರೆ ವಿವಾಹದ ದಿನ.

**ಕಾಶಿಯಾತ್ರೆ:-**

ವಿವಾಹದ ದಿನ ವಧೂವರರ ಮಂಗಳಸ್ನಾನ ನಡೆಯುತ್ತದೆ. ಅನಂತರ ನಡೆಯುವುದು ವರನ ಕಾಶಿಯಾತ್ರೆಯ ಕಾರ್ಯಕ್ರಮ. ಇದೊಂದು ವಿಶಿಷ್ಟ ರೀತಿಯ ಆಚರಣೆ. ಇದನ್ನು ಏಕೆ ಮಾಡುತ್ತಾರೆ ಮತ್ತು ಹೇಗೆ ಮಾಡುತ್ತಾರೆಂಬುದನ್ನು ಹೀಗೆ ತಿಳಿಯಬಹುದು. ಕಾಶಿ ಯಾತ್ರೆಗೆ ಮುಂಚೆ ವರನನ್ನು ವಿವಾಹ ಮಂಟಪದಲ್ಲಿ ಕೂರಿಸಿ ಕಾಶಿಯಾತ್ರೆಯ ಸಾಮಾನುಗಳನ್ನು ಅವನ ಮುಂದಿಡುತ್ತಾರೆ.

ಇದಾದ ಮೇಲೆ ವರ ಕಾಶಿಯಾತ್ರೆಗೆ ಹೊರಡುತ್ತಾನೆ. ಹಿಂದೆ ಗುರುಕುಲದಲ್ಲಿ ವಿದ್ಯಾಭ್ಯಾಸವ ಮಾಡಿ ಕಾಶಿಯಾತ್ರೆಯನ್ನು ಮಾಡಿಕೊಂಡು ಬರುವ ಪದ್ಧತಿಯಿದ್ದಿತಂತೆ. ಅದರ ಪ್ರತೀಕವಾಗಿ ಇದು ಈಗಲೂ ನಡೆಯುತ್ತಿದೆ. ತಾನು ಗೃಹಸ್ಥಾಶ್ರಮವನ್ನು ಆಶ್ರಯಿಸುವುದೇ ಇಲ್ಲವೇ ಸಂಸಾರವನ್ನು ಸ್ವೀಕರಿಸುವುದೇ ಎಂಬ ವಿಷಯದಲ್ಲಿ ಸ್ನೇಹಿತರೊಡನೆ ಆಲೋಚಿಸಿ ಒಂದು ನಿಶ್ಚಯಕ್ಕೆ ಬರಬೇಕು ಎಂದು ಹೇಳಿರುವುದನ್ನು ಹೀಗೆ ಆಚರಿಸುತ್ತಿದ್ದಾರೆ. ಇದರೊಡನೆ ಕಾಶಿಯಾತ್ರೆಗೆ ಬಳಸುವ ವಸ್ತುಗಳಿಗೂ ಬೇರೆ ಬೇರೆ ಅರ್ಥಗಳಿವೆ. ವರ ನೂತನ ವಸ್ತ್ರವನ್ನು ಉಟ್ಟು ಕೊಡೆ-ದಂಡಗಳನ್ನು ಹಿಡಿದುಕೊಂಡು, ಹೊದೆಯುವ ವಸ್ತ್ರಕ್ಕೆ, ಸ್ವಯಂಪಾಕಕ್ಕೆ ಬೇಕಾದ ಅಕ್ಕಿ, ಬೇಳೆ ಮೊದಲಾದವುಗಳನ್ನು ಕಟ್ಟಿಕೊಂಡು ಹೊರಡುತ್ತಾನೆ ಇದೇ ಕಾಶಿಯಾತ್ರೆ.

ಛತ್ರಿ, ಬೀಸಣಿಗೆ ಕಾಶಿಯಾತ್ರೆಯ ಪ್ರಯಾಣಕ್ಕೆ ಅನುಕೂಲಕರವಾಗಲೆಂದು ವಧುವಿನ ತಂದೆ ವರನಿಗೆ ಕನ್ನಡಿಯನ್ನು ತೋರಿಸುವುದು -ಹೀಗೆ ಮದುವೆಗಾಗಿ ನಿನ್ನನ್ನು ಅಲಂಕಾರ ಮಾಡಿದ್ದೇನೆ ನೋಡಿಕೋ ಎಂದು ತೋರಿಸುವ ದೃಷ್ಟಿಯಿಂದ ಕನ್ನಡಿ ಹಿಡಿಯುತ್ತಾನೆ. ಹೀಗೆ ಕಾಶಿಯಾತ್ರೆಗೆ ಹೊರಟು ನಿಂತ ವರ, ವಧುವಿನ ತಂದೆಯನ್ನು ಕುರಿತು ಬ್ರಹ್ಮಚರ್ಯವನ್ನು ನಡೆಸಿ ವೇದಾಧ್ಯಯನವನ್ನು ಮುಗಿಸಿ ಈಗ ಕಾಶಿಯಾತ್ರೆಗೆ ಹೊರಟಿದ್ದೇನೆ, ನನಗೆ ಶುಭಕೋರಿ ಅನುಮತಿಯನ್ನು ನೀಡಿ ಎಂದು ಕೇಳಿಕೊಳ್ಳುತ್ತಾನೆ. ಆಗ ವಧುವಿನ ತಂದೆ ವರನನ್ನು ಕಾಶಿಯಾತ್ರೆಗೆ ಹೋಗಬೇಡವೆಂದು ತಡೆಯುತ್ತಾನೆ. 'ಅಲಂಕೃತಳಾದ ನನ್ನ ಮಗಳನ್ನು ನಿನಗೆ ಕೊಡುತ್ತೇನೆ, ಇವಳ ಕೈ ಹಿಡಿದು ಮದುವೆಯಾಗು ಅನಂತರ ಕಾಶಿಯಾತ್ರೆಗೆ ಹೋಗುವಿಯಂತೆ, ಈಗ ಕನ್ಯಾ ಸ್ವೀಕಾರಕ್ಕಾಗಿ ನನ್ನ ಮನೆಗೆ ಬಾ'. ಎಂದು ಹೇಳುತ್ತಾ ವರನಿಗೆ ತನ್ನ ಮಗಳನ್ನು

ಕೊಟ್ಟು ನಿನಗೆ ವಿವಾಹವನ್ನು ಮಾಡುತ್ತೇನೆಂದು ಅವನನ್ನು ಒಪ್ಪಿಸುತ್ತಾನೆ. ಹೀಗೆ ಕೇಳಿದ ನಂತರ ವರ ಇದಕ್ಕೆ ಸಮ್ಮತಿಯನ್ನು ನೀಡಬೇಕು. ಈ ಸಂದರ್ಭದಲ್ಲಿ ವಧುವಿನ ತಂದೆ ವರನಿಗೆ ಪಾದರಕ್ಷೆಯನ್ನು ನೀಡುತ್ತಾನಲ್ಲದೆ, ಕನ್ನಡಿಯನ್ನು ತೋರಿಸಿ ಕಣ್ಣಿಗೆ ಕಪ್ಪಿಟ್ಟು ಹೀಗೆ ನಿನ್ನನ್ನು ಅಲಂಕರಿಸಿದ್ದೇನೆಂದು ಹೇಳುತ್ತಾನೆ. ಅನಂತರ ಅವನ ಪಾದವನ್ನು ತೊಳೆದು ಅವನನ್ನು ವಿವಾಹಕ್ಕೆ ಕರೆಯುತ್ತಾನೆ. ಇಲ್ಲಿಯೂ ಹಿರಿಯನಾದ ವಧುವಿನ ತಂದೆ ವರನ ಕಾಲನ್ನು ತೊಳೆದು ಅವನನ್ನು ವಿವಾಹ ಮಂಟಪಕ್ಕೆ ಕರೆತರುವುದು ಹಿಂದಿನಿಂದ ನಡೆದುಕೊಂಡು ಬಂದಿರುವ ಸಂಪ್ರದಾಯವಾಗಿದೆ.

ಈ ಕಾಶಿಯಾತ್ರೆಯ ಸಂದರ್ಭದಲ್ಲಿ ವರನ ಹಾಗೂ ವಧುವಿನ ಕಡೆಯಲ್ಲಿ ಇಬ್ಬರು ಕಳಶ ಕನ್ನಡಿಯನ್ನು ಹಿಡಿದು ನಿಲ್ಲುತ್ತಾರೆ. ಇವರನ್ನು ಕಳಶಗಿತ್ತಿ ಎನ್ನುವರು. ಇದನ್ನು ಹಿಡಿಯುವವರು ವರನ ಸೋದರಿ ಹಾಗು ವಧುವಿನ ಸೋದರಿ. ಇದರ ಉದ್ದೇಶ ನಮ್ಮ ಕುಟುಂಬಕ್ಕೆ ಹೊಸ ಸದಸ್ಯರಾಗಿ ಬರುತ್ತಿರುವ ವಧು ಹಾಗು ವರ, ಒಡಹುಟ್ಟಿದವರಾದ ನಮ್ಮೊಂದಿಗೂ ಉತ್ತಮ ಬಾಂಧವ್ಯ ಬೆಸೆಯಲಿ ನಮ್ಮನ್ನು ಕಡೆಗಣಿಸದಿರಲಿ ಎಂಬುವುದನ್ನು ಸೂಚಿಸುವತಿಂದೆ.

ಹೀಗೆ ವರನ ಕಾಶಿಯಾತ್ರೆ ನಡೆವ ಸಂದರ್ಭದಲ್ಲಿ ವಧು ಗೌರಿ ಪೂಜೆ ಮಾಡುತ್ತಾಳೆ. ಗೌರಿದೇವಿಯ ಮುಂದೆ ಅರಿಶಿನ-ಕುಂಕುಮ, ಬಳೆ, ಮಂಗಳ ದ್ರವ್ಯ ಇತ್ಯಾದಿಗಳನ್ನಿಟ್ಟು ಪೂಜೆ ಮಾಡಲಾಗುತ್ತದೆ. ಗೌರಿ ಪೂಜೆಯ ಅನಂತರ ವಧು ಮುತ್ತೈದೆಯರಿಗೆ ಬಾಗಿನ ನೀಡುತ್ತಾಳೆ.
ಆದರೆ ಆಕೆಯ ಮೊದಲ ಬಾಗಿನ ತಾಯಿಗೆ. ಅನಂತರ ಇತರ ನಾಲ್ಕು ಜನ ಮುತ್ತೈದೆಯರಿಗೆ ಬಾಗಿನ ನೀಡಬೇಕು.

ಕಾಶಿಯಾತ್ರೆಯ ನಂತರ ವರನನ್ನು ಮಂಗಳವಾದ್ಯಗಳೊಂದಿಗೆ ವಿವಾಹ ಮಂಟಪಕ್ಕೆ ಕರೆಯತರಲಾಗುತ್ತದೆ. ವಧುವನ್ನು ಅವಳ ಸೋದರಮಾವನೆ ಮಂಟಪಕ್ಕೆ ಕರೆತರಬೇಕು. ಇಲ್ಲಿ ಸೋದರಮಾವ ಕರೆತರಲು ಬಲವಾದ ಕಾರಣವಿದೆ ಅದೆಂದರೆ ಹಿಂದಿನ ಕಾಲಘಟ್ಟದಲ್ಲಿ ಬಾಲ್ಯವಿವಾಹಗಳು ಏರ್ಪಡುತ್ತಿದ್ದವಾದ್ದರಿಂದ ಆ ಸಂದರ್ಭದಲ್ಲಿ ವಧು ಚಿಕ್ಕ ಹುಡುಗಿಯಾದ್ದರಿಂದ ಅವರ ಸೋದರ ಮಾವಂದಿರು ಹೆಗಲ ಮೇಲೆ ವಧುವನ್ನು ಕೂರಿಸಿಕೊಂಡು ಬರುತ್ತಿದ್ದರು. ಜೊತೆಗೆ ಹಿಂದೆ ವಧುವನ್ನು ತಾಯಿಯ ತಮ್ಮ ಅಂದರೆ ಸೋದರಮಾವ ಮದುವೆಯಾಗುವ

ಸಂಪ್ರದಾಯವೂ ಇತ್ತು. 'ಈಗ ಅವಳನ್ನು ನಾನು ಮದುವೆಯಾಗುತ್ತಿಲ್ಲ ನೀನು ಮದುವೆಯಾಗು' ಎಂದು ಸೋದರಮಾವ ವರನಿಗೆ ಹೇಳುವುದಕ್ಕೆ ಸಾಂಕೇತಿಕವಾಗಿ ವಧುವನ್ನು ಸೋದರಮಾವ ಕರೆತರುತ್ತಾನೆ.

ವಿವಾಹ ಮಂಟಪಕ್ಕೆ ವಧು ವರನನ್ನು ಕರೆತಂದಾಗ ಇವರ ನಡುವೆ ಅಂತರಪಟವಿರುತ್ತದೆ. ಈ ಸಂದರ್ಭವನ್ನು 'ಕನ್ಯಾ ನಿರೀಕ್ಷಣೆ' ಎನ್ನುತ್ತಾರೆ. ಇದೇ ವಿವಾಹ ಮುಹೂರ್ತವೂ ಹೌದು. ಇದೇ ವಧು- ವರರ ಮೊದಲ ದೃಷ್ಟಿ ಸಮಾಗಮ. ಹೀಗೆ ಅಂತರಪಟವನ್ನು ಹಿಡಿದಿರುವಾಗ ಸಂಕಲ್ಪವನ್ನು ಹೇಳಿಸಿ ತೆರೆ ಸರಿಸುವರು. ಆಗ ಅವರಿಬ್ಬರ ಮೊದಲ ನೋಟ ಈ ಸಮಯದಲ್ಲಿ ವರ ವಧುವಿಗೆ ಕೆಲ ಮಾತುಗಳನ್ನು ಹೇಳುತ್ತಾನೆ. ವಧುವೇ ನೀನು ಶುಭ ದೃಷ್ಟಿಯವಳಾಗು, ನನ್ನ ಮನೆಯಲ್ಲಿನ ಎಲ್ಲರಿಗೂ ಮಂಗಳಕರವಾಗು, ಒಳ್ಳೆಯ ಮನಸ್ಸುಳ್ಳವಳಾಗು ಇತ್ಯಾದಿ. ಇಲ್ಲಿ ವಧುವನ್ನು ಉತ್ತಮ ಭಾವನೆಯಿಂದ ವರ ತನ್ನ ಮನೆಗೆ ಸ್ವಾಗತಿಸುವ ರೀತಿ ಉದಾತ್ತವಾದದ್ದು. ಅಂದರೆ ಹಿಂದಿನ ಕ್ರಮದಂತೆ ಇದೇ ಮೊದಲಿಗೆ ವರ, ವಧುವನ್ನು ನೋಡುತ್ತಿದ್ದುದರಿಂದ ಅವಳ ದೃಷ್ಟಿ ಮಂಗಳಕರವಾಗಲಿ, ಅವಳು ನನ್ನ ಬಾಳಿನಲ್ಲಿ ಸುಖಕರಳಾಗಿ, ಸಮಸ್ತರಿಗೂ ಒಳ್ಳೆಯದನ್ನು ಮಾಡಲಿ ಎಂದು ಆಶಿಸುವ ಉದ್ದೇಶವಿದೆ.

ಹೀಗೆ ಅಂತರಪಟ ಸರಿದಾದ ಮೇಲೆ ವಧೂ ವರರು ಪರಸ್ಪರ ತಲೆಯ ಮೇಲೆ ಸಮೃದ್ಧಿಯ ಸಂಕೇತವಾಗಿ ಜೀರಿಗೆ ಬೆಲ್ಲವನ್ನು ಹಾಕುತ್ತಾರೆ. ಹೀಗೆ ಜೀರಿಗೆ ಬೆಲ್ಲ ಹಾಕುವಾಗ ಯಾರು ಮೊದಲು ಹಾಕುವರೋ ಅವರಿಗೆ ಹಾಕಿಸಿಕೊಳ್ಳುವವರು ವಶವಾಗುತ್ತಾರೆ ಎಂಬ ಭಾವನೆ ಸೇರಿಬಿಟ್ಟಿದೆ. ಹೀಗಾಗಿ ಮೊದಲು ಹಾಕಲು ಪೈಪೋಟಿ ಇರುತ್ತದೆ. ಅನಂತರ ಮಂಗಳಕರವಾದ
ಅಕ್ಕಿಯನ್ನು ಪರಸ್ಪರ ತಲೆಯ ಮೇಲೆ ಹಾಕುತ್ತಾರೆ. ಇತ್ತೀಚಿನ ದಿನಗಳಲ್ಲಿ ಈ ಅಕ್ಕಿಯನ್ನು ಶೋಭಾಯಮಾನಗೊಳಿಸಲು ಬಣ್ಣದಿಂದ ಅಲಂಕರಿಸುತ್ತಾರೆ. ಅನಂತರ ವಧುವರರು ಪರಸ್ಪರ ಮಾಲೆಯನ್ನು ಬದಲಾಯಿಸಿಕೊಳ್ಳುವರು. ಇದನ್ನು 'ಸಂಬಂಧಮಾಲೆ' ಎನ್ನುತ್ತಾರೆ.

**ಕನ್ಯಾದಾನ:-**

ಕನ್ಯಾದಾನಕ್ಕೆ ಮೊದಲು ವಧುವಿನ ತಂದೆ ಸಭೆಯಲ್ಲಿ ಬಂದಿರುವ ಎಲ್ಲರ ಅನುಮತಿ ಕೋರುವುದನ್ನು 'ಸಭಾಪೂಜೆ' ಎನ್ನುವರು. ಈ ಸಮಯದಲ್ಲಿ ಹಿರಿಯರ ಆಶೀರ್ವಾದವನ್ನು

ಪಡೆಯಲಾಗುತ್ತದೆ. ವರನ ಮನೆಯವರು ಮನೆಯ ಹಿರಿಯರಿಗೂ, ವಧುವಿನ ಕಡೆಯವರು ತಮ್ಮ ಮನೆಯ ಹಿರಿಯರಿಗೂ 'ಪಾದಪೂಜೆ' ಮಾಡಿ ಅವರಿಗೆ ಉಡುಗೊರೆಗಳನ್ನು ನೀಡುತ್ತಾರೆ. ಕನ್ಯಾದಾನವನ್ನು ಮಾಡಲು ಅವರಿಂದ ಅನುಮತಿಯನ್ನು, ಆಶಿರ್ವಾದವನ್ನು ಪಡೆಯುತ್ತಾರೆ. ಇದೊಂದು ರೀತಿಯಲ್ಲಿ ಸೂಕ್ತವಾದ ಆಚರಣೆಯೆನಿಸಿದೆ.

ವಧುವಿನ ತಂದೆ ತಾಯಿ ಕನ್ಯಾದಾನಕ್ಕೆ ಮೊದಲು ವರನಿಗೆ ಮಧುಪರ್ಕದಿಂದ ಸತ್ಕರಿಸುವುದುಂಟು. ಹೀಗೆ ವರನ್ನು ನಾರಾಯಣ ಸ್ವರೂಪನೆಂದು ಗೌರವಿಸಿ, ಕನ್ಯೆಯನ್ನು ಮಹಾಲಕ್ಷ್ಮಿ ರೂಪಳೆಂದು ಅವಳನ್ನು ಧಾರೆಯೆರೆದು ಕೊಡುತ್ತಾರೆ. ಕನ್ಯೆಯ ತಾಯಿ ಬೆಳ್ಳಿ ತಂಬಿಗೆಯಲ್ಲಿನ ನೀರನ್ನು ಉದ್ಧರಣೆಯಿಂದ ವಧುವಿನ ಕೈಗೆ ಹಾಕುತ್ತಾರೆ. ತಂದೆಯ ಕೈ ಮೂಲಕ ನೀರನ್ನು ವಧುವಿನ ಕೈಗೆ ಹಾಕಲಾಗುತ್ತದೆ. ಹೀಗೆ ೩ ಬಾರಿ ಮಾಡುತ್ತಾರೆ. ಈ ಸಂದರ್ಭದಲ್ಲಿ ಆ ನೀರನ್ನು ಬೀಳದಂತೆ ವರನ ತಂದೆ ಹಾಗು ತಾಯಿ ಅದನ್ನು ತಟ್ಟೆಯಲ್ಲಿ ಹಿಡಿಯುತ್ತಾರೆ. ಅಂತೆಯೇ ವರ ಒಂದು ಅರ್ಥವತ್ತಾದ ಪ್ರತಿಜ್ಞೆಯನ್ನು ಮಾಡುತ್ತಾನೆ. ಈ ಪ್ರತಿಜ್ಞೆಯನ್ನು ವರ ಕನ್ಯೆಯ ಸಲುವಾಗಿ ವಧುವಿನ ತಂದೆ-ತಾಯಿಗೆ ಮಾಡುವಂಥದ್ದು. ವಧುವಿನ ತಂದೆ ವರನನ್ನು ಧರ್ಮೇಚ, ಅರ್ಥೇಚ, ಕಾಮೇಚ ಇವುಗಳಲ್ಲಿ ವಧು ಅತಿಕ್ರಮಿತಳಾಗದಿರಲಿ ಎಂದು ಕೇಳುತ್ತಾನೆ ಆಗ ವರ ಧರ್ಮೇಚ, ಅರ್ಥೇಚ, ಕಾಮೇಚ ಇಮಾ ನಾತಿಚರಾಮಿ ಎಂದು ಪ್ರತಿಜ್ಞೆ ಮಾಡುತ್ತಾನೆ.

**ಕಂಕಣ ಬಂಧನ:-**

ಕನ್ಯಾದಾನದ ಅನಂತರ 'ಕಂಕಣ ಬಂಧನ'ದ ಕಾರ್ಯಕ್ರಮ. ಈ ಸಂದರ್ಭದಲ್ಲಿ ವಧುವರರನ್ನು ಮಧ್ಯದಲ್ಲಿ ಕುಳ್ಳಿರಿಸಿ ನಾಲ್ಕುಜನ ದಂಪತಿಗಳು ನಾಲ್ಕು ಮೂಲೆಯಲ್ಲಿ ಕುಳಿತುಕೊಳ್ಳುತ್ತಾರೆ. ಹಾಲಿನಲ್ಲಿ ಅದ್ದಿದ ಕರಿಕಂಬಳಿದಾರ ಮತ್ತು ಹಸಿನೂಲನ್ನು ನಾಲ್ಕು ಮೂಲೆಗು ಹಿಡಿದುಕೊಂಡಿರಲಾಗುತ್ತದೆ. ಇದು ವಧುವರರನ್ನು ಒಂದು ಬಂಧನದಲ್ಲಿ ಬೆಸೆಯುವ ಸಂಕೇತ. ಆಗ ವಧು ವರನಿಗೂ, ವರ ವಧುವಿಗೂ ಕಂಕಣವನ್ನು ಕಟ್ಟುತ್ತಾರೆ. ಇದು 'ಕಂಕಣ ಬಂಧನ' ಇದನ್ನು ರಕ್ಷಣೆಯ ಸಲುವಾಗಿ ಕಟ್ಟುವುದು. ಇದನ್ನು ಕಟ್ಟಿರುವಾಗ ವಧುವರರು ಹೊರಗೆ ಹೋಗುವಂತಿಲ್ಲವೆಂದೂ ನಿಯಮ ವಿಧಿಸಲಾಗಿದೆ. ಆದ್ದರಿಂದ ವಿವಾಹದ ಅನಂತರ ಅದನ್ನು ತೆಗೆಯುತ್ತಾರೆ.

**ಮಾಂಗಲ್ಯ ಧಾರಣೆ:**

'ಕಂಕಣ ಬಂಧನ'ದ ನಂತರ ನಡೆಯುವ ಪ್ರಮುಖವಾದ ಕಾರ್ಯ ಮಾಂಗಲ್ಯ ಧಾರಣೆ. ನಮ್ಮ ಸಮಾಜದಲ್ಲಿ ಮಾಂಗಲ್ಯ ಧಾರಣೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ಮಾಂಗಲ್ಯ ಧಾರಣೆಯ ಸಂದರ್ಭದಲ್ಲಿ ಎಲ್ಲರ ಗಮನ ವಧೂ-ವರರತ್ತ ಕೇಂದ್ರಿಕೃತವಾಗುವುದು ಸಹಜ. ಈ ಮಾಂಗಲ್ಯ ಧಾರಣೆಗೆ ಮುಂಚೆ ಮಾಂಗಲ್ಯವನ್ನು ಪೂಜಿಸಲಾಗುತ್ತದೆ. ಮಾಂಗಲ್ಯ

ದೇವತೆಯನ್ನು ಕುರಿತು "ಸರ್ವ ಮಂಗಳ ಮಾಂಗಲ್ಯೇ...." ಎಲ್ಲ ಮಂಗಳಗಳಿಗೂ ಮಂಗಳ ಸ್ವರೂಪಳೇ ಎಂದು ಮುಂತಾಗಿ ಪೂಜಿಸಿ ಬಳಿಕ ಹಿರಿಯರ ಕೈಯಿಂದ ಅದನ್ನು ಮುಟ್ಟಿಸಿ ಅವರ ಆಶೀರ್ವಾದವನ್ನು ಪಡೆಯಲಾಗುತ್ತದೆ.

'ಮಾಂಗಲ್ಯಂ ತಂತುನಾನೇನ ಮಮ ಜೀವನ ಹೇತುನಾ'

ಸೌಭಾಗ್ಯ ವತಿಯೇ ನನ್ನ ಜೀವನಕ್ಕೆ ಕಾರಣವಾಗಿರುವ ಈ ತಂತುವಿನಿಂದ ಮಾಂಗಲ್ಯವನ್ನು ಕಂಠದಲ್ಲಿ ಕಟ್ಟುತ್ತೇನೆ. ನೀನು ನೂರು ವರ್ಷಗಳ ಕಾಲ ಬಾಳು ಎಂದು ಹೇಳುತ್ತಾ ವರ ವಧುವಿಗೆ ಮಾಂಗಲ್ಯವನ್ನು ಕಟ್ಟುತ್ತಾನೆ. ಮಾಂಗಲ್ಯ ವಧುವಿಗೆ ಗೃಹಿಣಿಯ ಸ್ಥಾನವನ್ನು ನೀಡುವಂತಹದು. ಆಕೆಯ ಮುತ್ತೈದೆತನದ ಸಂಕೇತ. ಮಾಂಗಲ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆ, ಪರಮ ಪಾವಿತ್ರ್ಯತೆಯು ಈ ಹಿನ್ನೆಲೆಯಲ್ಲಿ ದೊರೆತಿದೆ. ವಧು ವಿವಾಹಿತಳು ಎನ್ನುವುದನ್ನು ಸೂಚಿಸುವ ಪ್ರತ್ಯಕ್ಷ ಸೂಚಕವಿದು. ಈ ವಿವಾಹಕ್ಕೆ ನಾವೆಲ್ಲರೂ ಪ್ರತ್ಯಕ್ಷ ಸಾಕ್ಷಿಗಳು ಎನ್ನುವುದನ್ನು ಸೂಚಿಸುವಂತೆ ಮಾಂಗಲ್ಯವನ್ನು ಅಲ್ಲಿದ್ದ ಎಲ್ಲರ ಕೈಯಲ್ಲಿ ಮುಟ್ಟಿಸಿ ಬಳಿಕ ಕಟ್ಟಿಸುವರು. ಮಾಂಗಲ್ಯವನ್ನು ಕಟ್ಟಿದ ಅನಂತರ ವರ ವಧುವಿಗೆ ಕುಂಕುಮವನ್ನಿಟ್ಟು ಹೂ ಮುಡಿಸಿ ಅವಳಿಗೆ ಕಾಲುಂಗುರವನ್ನು ತೊಡಿಸುತ್ತಾನೆ. ಒಟ್ಟಿನಲ್ಲಿ ವರ ತನ್ನ ವಧುವನ್ನು ಮುತ್ತೈದೆಯಾಗಿ ಸಿಂಗರಿಸುತ್ತಾನೆ.

**ಪಾಣಿಗ್ರಹಣ:**

ಪಾಣಿಗ್ರಹಣ ಎಂದರೆ ಕೈಹಿಡಿಯುವುದು ಎಂದು. ಈ ಸಮಯದಲ್ಲಿ ವರ ವಧುವಿನ ಕೈಯನ್ನು ಹಿಡಿದು 'ದೈವಸಾಕ್ಷಿಯಾಗಿ ನೀನು ನನಗೆ ದೊರೆತಿದ್ದೀಯೆ, ನಾನು ಪೃಥ್ವಿಯಾದರೆ

ನೀನು ಸ್ವರ್ಗ ನಾವಿಬ್ಬರೂ ದಂಪತಿಗಳಾಗೋಣ." ಎಂದು ಹೇಳುತ್ತಾನೆ. ಇದು ದಂಪತಿಗಳ ಏಕತೆಯ, ಸ್ಥಿರತೆಯ ಸಂಕೇತವಾಗಿದೆ. ಈ ಪಾಣಿಗ್ರಹಣವನ್ನು ಒಂದು ಪವಿತ್ರ ಕಾರ್ಯ ಎಂದು ಭಾವಿಸಲಾಗಿದೆ. ವರ ವಧುವಿನ ಹೊಣೆಗಾರಿಕೆಯನ್ನು ಸ್ವೀಕರಿಸಿದ್ದಾನೆ ಎಂಬುದರ ಸೂಚಕವಾಗಿ ಅಗ್ನಿ ಸಾಕ್ಷಿಯಾಗಿ ಅವಳ ಕೈ ಹಿಡಿಯುತ್ತಾನೆ. ಅವಳನ್ನು ಹೆಂಡತಿಯಾಗಿ ಸ್ವೀಕರಿಸುತ್ತಾನೆ. ಇಲ್ಲಿ ಪಾಣಿಗ್ರಹಣವೆಂಬುದನ್ನು ಸಾಂಕೇತಿವಾಗಿ ಆಚರಿಸುವುದಲ್ಲ. ಪತಿ ತನ್ನ ಪತ್ನಿಗೆ ಬಾಳಿನ ಅಂತಿಮ ಹಂತದವರೆಗೂ ಕೈ ಹಿಡಿಯುತ್ತೇನೆ ಎಂದು ನೀಡುವ ವಾಗ್ದಾನವಾಗಿದೆ.

**ಸಪ್ತಪದಿ:**

ಸಪ್ತಪದಿಯಲ್ಲಿ ವಧೂವರರು ಏಳು ಹೆಜ್ಜೆಗಳನ್ನು ಇಡುತ್ತಾರೆ. ಇಲ್ಲಿ ಒಂದೊಂದು ಹೆಜ್ಜೆಗೂ ಒಂದೊಂದು ಅರ್ಥವಿದೆ. ಇಲ್ಲಿ ಅಗ್ನಿಗೆ ಎದುರಾಗಿ ಏಳು ಅಕ್ಕಿಯ ಗುಡ್ಡೆಯನ್ನು ಹಾಕುತ್ತಾರೆ. ಆ ರಾಶಿಗಳೇ ಸಪ್ತಪದಿ ದೇವತೆಗಳು. ಒಂದೊಂದು ರಾಶಿಯ ಮೇಲೂ ವರ ವಧುವಿನ ಹೆಜ್ಜೆಯನ್ನಿಡಿಸುತ್ತಾ ಕ್ರಮವಾಗಿ ಏಳು ಹೆಜ್ಜೆಗಳನ್ನಿಡಿಸುತ್ತಾನೆ. ಮೊದಲನೆಯದು 'ಸಾರ'ದ ಸೂಚಕ ಎರಡನೆಯದು 'ಸವಿ', ಮೂರನೆಯದು 'ಧನವೃದ್ದಿ', ನಾಲ್ಕನೆಯದು 'ಸೌಲಭ್ಯ' ಐದನೆಯದು 'ಮಕ್ಕಳು', ಆರನೆಯದು 'ಋತುಮಾನಗಳು', ಏಳನೆಯದು 'ಸಮೃದ್ದಿ ಮತ್ತು ಸ್ನೇಹ', ಹೀಗೆ ವರ ವಧುವಿನ ಕೈಯನ್ನು ಹಿಡಿದು ಸಪ್ತಪದಿ ತುಳಿಯುತ್ತಾನೆ. ವಧುವನ್ನು "ನನ್ನ ಜೊತೆಯಾಗಿ ಬಾ' ಎಂದು ಕೇಳುವ ರೀತಿ ಏಳು ಹೆಜ್ಜೆಗಳನ್ನು ಇಡಿಸಲಾಗುತ್ತದೆ. ವಧು-ವರರು ಪರಸ್ಪರ ಸ್ನೇಹಿತರಾಗುವ, ಅವರಿಬ್ಬರ ನಡುವೆ ಮೈತ್ರಿಯನ್ನು ಬೆಸೆಯುವಂಥದ್ದು ಸಪ್ತಪದಿ.

ಇಲ್ಲಿ ನಿಂಬೆಹಣ್ಣನ್ನು ಸಿಕ್ಕಿಸಿದ ಚಾಕುವನ್ನು ಹಿಡಿಯುವುದು ಏಕೆಂದರೆ ಯಾವ ದುಷ್ಟಶಕ್ತಿಗಳೂ ತೊಂದರೆ ನೀಡದಂತೆ ಒಂದು ರಕ್ಷಣೆಯ ಕುರುಹಾಗಿ. ಹೀಗೆ ಮುತ್ತೈದೆಯರು ೫ ಬಾರಿ ಮಂಟಪವನ್ನು ಸುತ್ತಿ ಬಂದ ನಂತರ ವಧೂವರರು ಆ ಮಂಟಪವನ್ನು ಸುತ್ತಿ ಬರುತ್ತಾರೆ. ಈ ಮೊದಲು ವಧೂವರರು ಕಟ್ಟಿಕೊಂಡಿದ್ದ ಕಂಕಣವನ್ನು ಇಲ್ಲಿ ವಿಸರ್ಜಿಸುತ್ತಾರೆ. ಏಕೆಂದರೆ ಕಂಕಣ ಕೈಯಲ್ಲಿ ಇರುವವರೆಗೂ ಅವರಿಬ್ಬರೂ ಹೊರಗೆ ಹೋಗುವಂತಿಲ್ಲ. ಅನಂತರ ವಧೂವರರು ಹಿರಿಯರಿಗೆ ನಮಸ್ಕರಿಸಿ ಅವರ ಆಶೀರ್ವಾದವನ್ನು ಪಡೆಯುತ್ತಾರೆ.

**ದಂಪತಿ ವೀಳ್ಯ:-**

ದಂಪತಿಗಳಾದ ವಧೂವರರು ಉಳಿದ ದಂಪತಿಗಳಿಗೆ ತಾಂಬೂಲವನ್ನು ನೀಡಿ ಅವರಿಂದ ಆಶೀರ್ವಾದ ಪಡೆಯುವುದು. ದಾಂಪತ್ಯ ವೀಳ್ಯವನ್ನು ನೀಡಿದ ಬಳಿಕ ವಧುವಿನ ಸಹೋದರ ವಧೂವರರಿಗೆ ತಾಂಬೂಲವನ್ನು ಮಡಿಸಿಕೊಡುತ್ತಾನೆ. ಅವರಿಬ್ಬರೂ ಅದನ್ನು ಅವನಿಂದ ಸ್ವೀಕರಿಸಬೇಕು. ಇದು ದಾಂಪತ್ಯದಲ್ಲಿ ಅನ್ಯೋನ್ಯತೆ ಮೂಡಲು ಮಾಡುವ ಆಚರಣೆ. ಅನಂತರ ಒಂದು ಪಾತ್ರೆಯಲ್ಲಿ ತುಂಬಿದ ನೀರಿನಲ್ಲಿ ಚಿನ್ನದ ಉಂಗುರವನ್ನು ನಿಂಬೆಹಣ್ಣಿನೊಂದಿಗೆ ಹಾಕುತ್ತಾರೆ. ವಧೂವರ ಇಬ್ಬರೂ ಸೇರಿ ಇದನ್ನು ಹುಡುಕಬೇಕು. ಯಾರು ಮೊದಲು ಇದನ್ನು ತೆಗೆಯುತ್ತಾರೆ ಎಂದು ಎಲ್ಲರೂ ಕುತೂಹಲದಿಂದ ಕಾಯುತ್ತಿರುತ್ತಾರೆ. ಉಂಗುರವನ್ನು ಮೊದಲು ತೆಗೆಯಬೇಕೆಂದು ವಧೂವರ ಇಬ್ಬರನ್ನೂ ಹುರಿದುಂಬಿಸಲು ಬಯಸುತ್ತಾರೆ. ಈ ರೀತಿ ಯಾರು ಉಂಗುರವನ್ನು ತೆಗೆಯುತ್ತಾರೋ ಅವರೇ ವೈವಾಹಿಕ ಜೀವನದಲ್ಲಿ ಮೇಲುಗೈ ಸಾಧಿಸುತ್ತಾರೆ ಎಂದು ಹೇಳುವುದುಂಟು. ಅನಂತರ ವಧೂವರ ಈ ಇಬ್ಬರೊಂದಿಗೆ ಇತರ ದಂಪತಿಗಳು ಸೇರಿ ಪತಿ-ಪತ್ನಿಯರು ಪರಸ್ಪರ ಒಬ್ಬರ ನೆತ್ತಿ ಮೇಲೆ ಮತ್ತೊಬ್ಬರು ಹಪ್ಪಳಗಳನ್ನು ಬಡಿದು ನಕ್ಕು ನಲಿಯುತ್ತಾರೆ. ಹಿಂದೆ ವಧೂವರರ ನಡುವೆ ಹೂವಿನ ಚೆಂಡಿನಾಟ ಆಚರಿಸುತ್ತಿದ್ದರು. ವಧೂವರರ ನಡುವೆ ಸಲುಗೆ ಬೆಳೆಯಲೆಂದು ಇವೆಲ್ಲವನ್ನೂ ಆಡಿಸುತ್ತಾರೆ. ಅನಂತರ 'ಉಪ್ಪಿನಾನೆ ಅಕ್ಕಿಯಾನೆಯ ಆಚರಣೆ' ಇದರಲ್ಲಿ ಎರಡು ಬಾಳೆಲೆಗಳನ್ನು ಎದುರು-ಬದುರಾಗಿಟ್ಟು ಒಂದರಲ್ಲಿ ಅಕ್ಕಿಯಿಂದ ಆನೆಯನ್ನು ಇನ್ನೊಂದರಲ್ಲಿ ಉಪ್ಪಿನಿಂದ ಆನೆಯನ್ನು ಬರೆಯುತ್ತಾರೆ. ವಧೂವರ ಇಬ್ಬರನ್ನೂ ಒಂದೊಂದು ಆನೆಯ ಮೇಲೆ ಕಾಲಿನ ಬೆರಳಿಡಿಸಿ ನಿಲ್ಲಿಸುತ್ತಾರೆ. ಆಗ ವಧು 'ಎನ್ನರಸ, ಚೆನ್ನರಸ, ಪಟ್ಟದರಸ, ಪ್ರಾಣಕಾಂತ' ಎಂದು ಹೇಳಿದರೆ ವರ 'ಎನ್ನರಸಿ, ಚೆನ್ನರಸಿ, ಪಟ್ಟದರಸಿ, ಪ್ರಾಣಕಾಂತೆ' ಎಂದು ಸಂಬೋಧಿಸುತ್ತಾನೆ. ಆಗ ಪರಸ್ಪರ ಇಬ್ಬರೂ ತಮ್ಮ ಆನೆ ಇನ್ನೊಬ್ಬರಿಗಿಂತ ಹೆಚ್ಚು ಎಂದು ಹೇಳುತ್ತಾರೆ. 'ನನ್ನ ಉಪ್ಪಿನಾನೆಯ ಬೆಲೆ ಕೋಟಿಗಳದ್ದು ನಿನ್ನದು ಬರಿ ಮೂರೆ ಪೈಸೆ ನಿನ್ನ ಆನೆ ನನಗೆ ಕೊಟ್ಟುಬಿಡು ಎಂದು ಪರಸ್ಪರ ಕಚ್ಚಾಡುತ್ತಾರೆ. ಈ ಎಲ್ಲಾ ಆಚರಣೆಗಳು ಮದುವೆಯಲ್ಲಿ ಮನರಂಜನೆ ಒದಗಿಸುವುದರ ಜೊತೆಗೆ ದಂಪತಿಗಳಲ್ಲಿ ಅನ್ಯೋನ್ಯತೆ ಉಂಟಾಗಲು ಸಹಕಾರಿಯಾಗಿವೆ.

**ಹೆಣ್ಣು ಒಪ್ಪಿಸುವುದು:**

ವಿವಾಹದ ಕೊನೆಯ ಹಂತದ ಕಾರ್ಯಕ್ರಮ ಇದಾಗಿದೆ. ವಧುವನ್ನು ಪತಿಗೃಹಕ್ಕೆ ಕಳುಹಿಸುವ ಮುನ್ನ ಅವಳ ಜವಬ್ದಾರಿಯನ್ನು ಅವಳ ಗಂಡನಿಗೆ ಹಾಗೂ ಅತ್ತೆ ಮಾವನಿಗೆ ಒಪ್ಪಿಸುವಂತಹ ಆಚರಣೆ. ವಧುವನ್ನು ಹಸೆಮಣೆಯ ಮೇಲೆ ಕೂರಿಸಿ ಅವಳಿಗೆ ತವರು ಮನೆಯ ಕಡೆಯಿಂದ ಅರಿಶಿನ ಕುಂಕುಮ ಹೂವನ್ನು ಕೊಡುತ್ತಾರೆ. ಮೊದಲಬಾರಿಗೆ ನೀಡುವಾಗ ಹತ್ತು ಅಚ್ಚು ಬೆಲ್ಲದೊಂದಿಗೆ ಸೋಗಲಕ್ಕಿಯನ್ನು ಇಡುತ್ತಾರೆ. ಆಗ ತಾಯಿ ತನ್ನ ಮಗಳಿಗೆ ಮಂಗಳಗೌರಿ ದೇವಿಯ ಹೆಸರಿನಲ್ಲಿ ಬಾಗಿನ ನೀಡುತ್ತಾರೆ. ಅದು ತವರು ಮನೆಯ ಬಾಗಿನ ವಧುವಿಗೆ. ಈ ಸಂದರ್ಭದಲ್ಲಿ ತವರು ಮನೆಯಿಂದ ಹತ್ತು ಬಗೆಯ ತಿಂಡಿಗಳು, ಹತ್ತು ಬಗೆಯ ಹಣ್ಣುಗಳು ಇವಲ್ಲದೆ ವಧು ಮುಂದಿನ ಜೀವನಕ್ಕೆ ಬೇಕಾಗಬಹುದಾದ ಪಾತ್ರೆಗಳು, ಚಿನ್ನದ ಹಾಗೂ ಬೆಳ್ಳಿಯ ಪಾತ್ರೆಗಳನ್ನು ಇಡಲಾಗುತ್ತದೆ. ಹೊಸ ಸೀರೆ ಹಾಗೂ ಕಣವನ್ನು ವಧುವಿಗೆ ಉಡುಗೊರೆಯಾಗಿ ನೀಡುತ್ತಾರೆ. ಇವೆಲ್ಲಾ ಒಂದು ಸಂಪ್ರದಾಯದಂತೆ ಮಾಡುವ ಆಚರಣೆಯಲ್ಲ. ತವರು ಮನೆಯು ಪ್ರೀತಿಯಿಂದ ಹರಸಿ ನೀಡುವಂತಹ ವಸ್ತುಗಳು. ಅನಂತರ ವಧುವನ್ನು ಅವಳ ಅತ್ತೆ ಮಾವರ ತೊಡೆಯಮೇಲೆ ಕೂರಿಸಿ ಹಾಲು ಕೊಡುತ್ತಾರೆ. ಇದರಿಂದ ವಧುವನ್ನು ಅತ್ತೆಮಾವಂದಿರು ಮಗಳಂತೆ ನೋಡಿಕೊಳ್ಳಲಿ ಎಂಬುದು ಇವರ ಆಶಯವಾಗಿದೆ. ಅನಂತರ ವಧುವನ್ನು ಸೋದರ ಮಾವನ ಜೊತೆಗೂಡಿ ವರನ ಮನೆಗೆ ಕಳುಹಿಸಿಕೊಡುತ್ತಾರೆ. ವಧು ಪತಿಗೃಹವನ್ನು ಪ್ರವೇಶಿಸುವ ಮುನ್ನ ಹೊಸ್ತಿಲಲ್ಲಿ ಸೇರಿನೊಳಗೆ ಅಕ್ಕಿಯನ್ನು ತುಂಬಿ ಅದರ ಮೇಲೆ ಬೆಲ್ಲವನ್ನಿಟ್ಟು ವಧುವಿನ ಬಲಗಾಲಿನಿಂದ ಅದನ್ನು ಒದೆಸುತ್ತಾರೆ. ಆ ಅಕ್ಕಿ ಮನೆಯ ಒಳಗೆಲ್ಲಾ ಚೆಲ್ಲಾಡುತ್ತದೆ. ಹೀಗೆ ವಧು ಸೇರನ್ನು ಒದ್ದು ಒಳಗೆ ಹೋಗುವುದು ಸಮೃದ್ಧಿಯ ಸಂಕೇತ.

ಸಾಮಾನ್ಯವಾಗಿ ವಿವಾಹದ ಆಚರಣೆಗಳು ದೀರ್ಘವಾಗಿಯೆ ಇರುತ್ತವೆ. ಅಂತೆಯೆ ಬ್ರಾಹ್ಮಣ ವಿವಾಹ ಪದ್ಧತಿ ವಿವಿಧ ಆಚರಣೆಗಳನ್ನು ಒಳಗೊಂಡಿದೆ. ಆದರೆ ಇಂದು ಎಲ್ಲಾ ಆಚರಣೆಗಳನ್ನು ಅರ್ಥಪೂರ್ಣವಾಗಿಯೇ ಆಚರಿಸಲಾಗುತ್ತಿದೆ ಎಂದು ಹೇಳಲಾಗುವುದಿಲ್ಲ. ಹಿಂದೆ ಆಚರಿಸುತ್ತಿದ್ದ ಕೆಲವು ಆಚರಣೆಗಳು ಆಯಾ ಸಂದರ್ಭಕ್ಕೆ ಅನುಗುಣವಾಗಿ ಸರಿಯೆನಿಸುತ್ತಿದ್ದವು. ಅವುಗಳ ಹಿಂದೆ ನಿರ್ದಿಷ್ಟ ಉದ್ದೇಶವಿರುತ್ತಿತ್ತು. ಆದರೆ ಅಂತಹ ಆಚರಣೆಗಳಲ್ಲಿ ಕೆಲವು ಪ್ರಸ್ತುತ ಸಂದರ್ಭದಲ್ಲಿ

ಅಸಂಬದ್ಧ ಹಾಗೂ ಅರ್ಥಹೀನ ಎನಿಸುತ್ತವೆ ಅಂತೆಯೆ ವಿವಾಹವನ್ನು ಸಂಪ್ರದಾಯ ಬದ್ಧವಾಗಿ ಆಚರಿಸುವುದೆಂದರೆ ಆಡಂಬರದಿಂದ ಆಚರಿಸುವುದೆಂದೆ ಕೆಲವರು ಭಾವಿಸುತ್ತಾರೆ. ಆದರೆ ವಾಸ್ತವದಲ್ಲಿ ಹಾಗಿಲ್ಲ. ಇಲ್ಲಿ ಆಚರಣೆಗಳ ಹಿಂದಿನ ಆಶಯ, ಅರ್ಥ, ಉದ್ದೇಶಗಳ ಅರಿವು ಅತಿಮುಖ್ಯ. ಈ ಹಿನ್ನೆಲೆಯಲ್ಲಿ ಪತ್ನಿಯನ್ನು ಸ್ನೇಹಿತಳಂತೆ ಭಾವಿಸುವ ಸಪ್ತಪದಿ, ಅವಳ ಕೈಹಿಡಿದು ವಾಗ್ದಾನ ನೀಡುವ ಪಾಣಿಗ್ರಹಣ ಹೃದಯಸ್ಪರ್ಶಿ ಆಚರಣೆ. ಇವುಗಳನ್ನು ಅರ್ಥಪೂರ್ಣವೆಂದು ಹೇಳಬಹುದು. ಆದರೆ ಈ ವಿವಾಹದ ಆಚರಣೆಯಲ್ಲಿಯೆ ವರೋಪಚಾರ, ಚಿನ್ನ, ಬೆಳ್ಳಿ, ಉಂಗುರ,

ಉಡುಗೊರೆಗಳ ಆಡಂಬರವನ್ನು ಸಂಪ್ರದಾಯದ ಹೆಸರಿನಲ್ಲಿ ನಡೆಸುವುದುಂಟು. ಇವುಗಳನ್ನು ಕೈಬಿಟ್ಟು ವಿವಾಹ ಆಚರಣೆಯ ಹಿಂದಿರುವ ಪವಿತ್ರ ಭಾವನೆಯನ್ನು ನಂಬಿಕೆಗಳನ್ನು ತಿಳಿದು ಅದಕ್ಕೆ ಅನುಗುಣವಾಗಿ ಆಚರಣೆಗಳನ್ನು ಮಾಡುವುದು ಅತ್ಯಂತ ಅವಶ್ಯಕ. ವಿವಾಹ ಆಚರಣೆ ಗಂಡು ಹೆಣ್ಣಿನ ನಡುವೆ ಶಾಶ್ವತವಾದ, ಪವಿತ್ರವಾದ ಸಂಬಂಧವನ್ನು ಬೆಸೆಯುವಂತಹ ಆಚರಣೆಯೆ ಹೊರತು ಅನವಶ್ಯಕ ದುಂದುವೆಚ್ಚದ ಆಡಂಬರ, ವೈಭವದ ಆಚರಣೆಯಲ್ಲ. ಇದನ್ನು ಉದ್ದೇಶವಾಗಿಟ್ಟುಕೊಂಡು 'ವಿವಾಹ'ವನ್ನು ಆಚರಿಸಬೇಕು ಮತ್ತು ಸರಳಗೊಳಿಸಬೇಕು ಎಂಬುದನ್ನು ನಾವು ಮರೆಯುವಂತಿಲ್ಲ.

**ಶ್ರಾದ್ಧ:**

ಮಾನವನ ಜೀವನದಲ್ಲಿ ಸಾವು ಅನಿವಾರ್ಯ ಹಾಗೂ ಅಷ್ಟೇ ನಿಗೂಢವಾದುದು. ಮರಣ ಮನುಷ್ಯನಲ್ಲಿ ಭಯ, ಜುಗುಪ್ಸೆ ಹುಟ್ಟಿಸುವಂತಹ ವಿಷಯವೂ ಆಗಿದೆ. ಏಕೆಂದರೆ ಮರಣ ಜೀವನವನ್ನು ಅಂತ್ಯಗೊಳಿಸುವಂಥದ್ದು. ಆದರೆ ಶ್ರಾದ್ಧದ ಆಚರಣೆಯಲ್ಲಿ ಆತ್ಮದ ಪರಿಕಲ್ಪನೆ ಅತಿಮುಖ್ಯವಾದುದು. ಸಾವಾದಾಗ ಮತ್ತು ಸಾವಿನ ನಂತರ ಪ್ರತಿವರ್ಷ ನಡೆಸುವ ಕಾರ್ಯಗಳೆ ಶ್ರಾದ್ಧಕರ್ಮಗಳೆನಿಸುತ್ತವೆ. ಮರಣ ಹೊಂದಿರುವ ಪೂರ್ವಿಕರನ್ನು ಸಂತೃಪ್ತಿಗೊಳಿಸಲೆಂದು ಈ ಕಾರ್ಯ ನಡೆಸುತ್ತಾರೆ. 'ಶ್ರಾದ್ಧ' ಈ ಪದ 'ಶ್ರದ್ಧಾ' ಎಂಬ ಪದದಿಂದ ಬಂದಿದೆ. ಅಂದರೆ ನಂಬಿಕೆ, ನಿಷ್ಠೆ ಎನ್ನುವ ಅರ್ಥದಲ್ಲಿ ಶ್ರದ್ಧೆಯಿಂದ ಮಾಡುವ ಕಾರ್ಯ ಶ್ರಾದ್ಧ. ಆದರೆ ಈ ಪದದ ಬಳಕೆ ಮರಣದ ನಂತರ ಮಾಡುವ ಧಾರ್ಮಿಕ ಕ್ರಿಯೆಗಳಿಗೆ ಹಾಗೂ ಆಚರಣೆಗಳಿಗೆ ಸೀಮಿತವಾಗಿದೆ.

ಶ್ರಾದ್ಧವನ್ನು ಮೂರು ತಲೆಮಾರಿನ ಪೂರ್ವಿಕರಿಗೆ, ತಂದೆ, ಅಜ್ಜ, ಮುತ್ತಜ್ಜ ಇವರ ಸದ್ಗತಿ ಪ್ರಾಪ್ತಿಗಾಗಿ ಆಚರಿಸುತ್ತಾರೆ. ಶ್ರಾದ್ಧ ಮಾಡುವವನನ್ನು 'ಕರ್ತಾ' ಎನ್ನುತ್ತಾರೆ.

ಶ್ರಾದ್ಧದ ದಿನ ಅಡುಗೆ ಅಥವಾ ಇತರೆ ಕಾರ್ಯಗಳಿಗೆ ಹಾಲು, ಗಂಗಾಜಲ, ಕರಿಎಳ್ಳು, ಜೇನುತುಪ್ಪ, ಗೋಧಿ, ಉದ್ದು, ಹೆಸರುಕಾಳು, ಹೆಸರುಬೇಳೆ ಇವುಗಳನ್ನು ಬಳಸುತ್ತಾರೆ. ಮೊದಲಿಗೆ ಕಾರ್ಯಗಳು ನಿರ್ವಿಘ್ನವಾಗಿರಲೆಂದು ಗಣಪತಿಯನ್ನು ಪೂಜಿಸುತ್ತಾರೆ. ಅನಂತರ 'ಕರ್ತ' ಶ್ರಾದ್ಧಕಾರ್ಯ ಮಾಡುತ್ತೇನೆಂದು ಸಂಕಲ್ಪ ಮಾಡುತ್ತಾನೆ. ಪೂಜೆಗೆ ಅಗತ್ಯವಾದ ತೀರ್ಥವನ್ನು ಕಲಶದಲ್ಲಿಟ್ಟು ಗಂಧ, ಅಕ್ಷತೆಗಳಿಂದ ಪೂಜಿಸಿ ಅದಕ್ಕೆ ತುಳಸಿಯನ್ನು ಹಾಕಿ ಪವಿತ್ರಗೊಳಿಸುತ್ತಾನೆ. ಕಲಶದಲ್ಲಿರುವ ನೀರು ಗಂಗಾನದಿಯಷ್ಟೆ ಪವಿತ್ರವಾಗಿರಲಿ ಎಂದು ಪ್ರಾರ್ಥಿಸಲಾಗುತ್ತದೆ. ಈ ಕಲಶದ ನೀರಿನಿಂದ ಕುಳಿತುಕೊಳ್ಳುವ ಜಾಗವನ್ನು, ಪೂಜೆಗೆ ಬಳಸುವ ಉಪಕರಣವನ್ನು ಜಲದಿಂದ ಪ್ರೋಕ್ಷಿಸುತ್ತಾರೆ. ಮೂರು ಜನ ಬ್ರಾಹ್ಮಣರನ್ನು ಆಹ್ವಾನಿಸುತ್ತಾರೆ. ಇವರು'ವಿಶ್ವದೇವ' ರೂಪದಲ್ಲಿ ತಂದೆ,ಅಜ್ಜ,ಮುತ್ತಜ್ಜ ರ ಪ್ರತಿನಿಧಿಯಾಗಿ ಕಂಡು ಬರುತ್ತಾರೆ. ಶ್ರಾದ್ಧ ಮಾಡುವವರು ಬೆರಳಿಗೆ ದರ್ಭೆಯಿಂದ ಮಾಡಿದ ಪವಿತ್ರವನ್ನು ಧರಿಸುತ್ತಾರೆ. ಹಿಂದೆಯೇ ಹೇಳಿದಂತೆ ಇದು ಪವಿತ್ರತೆಯ ಸಂಕೇತ. ಆ ಮೂರು ಜನ ಪಿತೃಗಳಿಗೆ ನಮಸ್ಕರಿಸಿ ಕಾರ್ಯ ಆರಂಭಿಸಲಾಗುತ್ತದೆ. ಆ ಪಿತೃಗಳಾಗಲಿ, ದೇವತೆಗಳಾಗಲಿ ನಾವು ಮಾಡುತ್ತಿರುವ ಕಾರ್ಯಕ್ಕೆ ಆಗಮಿಸಿದರೆಂಬ ಭಾವನೆಯಿಂದ ಎಳ್ಳನ್ನು ಸುತ್ತಲೂ ಎರಚುವರು. ಈ ಸಂದರ್ಭದಲ್ಲಿ ದೇವರಿಗೆಂದು ಇಟ್ಟ ಪಾತ್ರೆಯಲ್ಲಿ ನೀರನ್ನು ತುಂಬಿ,ಮೊದಲು ದರ್ಭೆಯಿಂದ ಮುಚ್ಚುತ್ತಾರೆ. ಅನಂತರ ಅದಕ್ಕೆ ತೊಳೆದ ಅಕ್ಕಿಯನ್ನು ದರ್ಭೆ ಸಮೇತ ಹಾಕಿ ಅದರೊಳಗಿನ ನೀರು ಎಲ್ಲರಿಗೂ ಸುಖವನ್ನು ಉಂಟುಮಾಡಲಿ ಎಂದು ಪ್ರಾರ್ಥನೆ ಮಾಡುತ್ತಾರೆ. ಅದರೊಳಗೆ ಒಂದು ತೊಟ್ಟು ಜೇನನ್ನು ಸೇರಿಸುತ್ತಾರೆ. ದೇವಪಾತ್ರೆಗೆ ಗಂಧ, ಅಕ್ಷತೆ, ತುಳಸಿಗಳಿಂದ ಪೂಜೆ ಸಲ್ಲಿಸಿ ಅದಕ್ಕೆ ಒಂದು ಬಾಳೆಹಣ್ಣನ್ನು ನೈವೇದ್ಯ ಮಾಡಿ ದರ್ಭೆಯಿಂದ ಮುಚ್ಚುತ್ತಾರೆ.

ಅನಂತರ ಪಿತೃಗಳನ್ನು ಸತ್ಕರಿಸುವ ಸಲುವಾಗಿ ಅವರಿಗಾಗಿಯೆ ಪ್ರತ್ಯೇಕವಾಗಿ ಪಾತ್ರೆ ಇಡಲ್ಪಡುತ್ತದೆ. ಇದು ಪಿತೃಗಳಿಗೆ ಅರ್ಘ್ಯವನ್ನು ನೀಡಲು ಇಡುವಂತಹ ಪಾತ್ರೆ, ಮೊದಲು ಇದರಲ್ಲಿ ಎಳ್ಳನ್ನು ಹಾಕಿ ಅನಂತರ ಅದರಲ್ಲಿ ನೀರನ್ನು ತುಂಬುತ್ತಾರೆ. ಹೀಗೆ ಎಳ್ಳನ್ನು ತುಂಬಿ, ನೀರನ್ನು

ಪಾತ್ರೆಗೆ ಹಾಕುವಾಗ 'ನನ್ನ ಪಿತೃಗಳಿಗೋಸ್ಕರ ಈ ಅರ್ಘ್ಯವನ್ನು ನೀಡುತ್ತಿದ್ದೇನೆ' ಎಂದು ಪ್ರಾರ್ಥಿಸುತ್ತಾ ನೀರನ್ನು ಇಲ್ಲಿಯೂ ದೇವಪಾತ್ರೆಗೆ ಮಾಡಿದಂತೆಯೆ ತುಂಬಲಾಗುತ್ತದೆ. ಪೂಜಿಸಿದ ಅನಂತರ ಪಾತ್ರೆಗಳನ್ನು ಅತ್ತಿಎಲೆ ಅಥವಾ ಮುತ್ತುಗದ ಎಲೆಗಳಿಂದ ಮುಚ್ಚಲಾಗುತ್ತದೆ. ಅನಂತರ ಆಹ್ವಾನಿತರಿಗೆ ಭೋಜನ ನೀಡಿ ತೃಪ್ತಿಪಡಿಸುವುದು. ಬಂದಂತಹ ಆಹ್ವಾನಿತರಿಗೆಲ್ಲಾ ಕಾಲುತೊಳೆಯಲು ನೀರು ಕೊಡಬೇಕು. ಕೆಲವರನ್ನು ತಟ್ಟೆಯಲ್ಲಿ ನಿಲ್ಲಿಸಿ ನೀರನ್ನು ಹಾಕಿ ಕಾಲು ತೊಳೆಯುತ್ತಾರೆ. ಮೊದಲು ವಿಶ್ವದೇವರಿಗೆ ಒಂದು ಚೌಕಟ್ಟನ್ನು ನಿರ್ಮಿಸಿ ಅದರ ಮೇಲೆ ತಟ್ಟೆಯನ್ನಿಟ್ಟು ಅವರ ಕಾಲುಗಳನ್ನಿರಿಸಿ" ಈ ಶ್ರಾದ್ಧಕ್ಕೆ ವಿಶ್ವದೇವರೇ ನಿಮಗೆ ಸ್ವಾಗತ" ಎಂದು ಸ್ವಾಗತಿಸುವರು. ಅಕ್ಷತೆಯ ನೀರಿನಿಂದ ಅವರ ಕಾಲನ್ನು ತೊಳೆಯುವುದೂ ಉಂಟು. ಅನಂತರ ಅವರ ಪಾದವನ್ನು ಒರೆಸಿ ಗಂಧವನ್ನು ಲೇಪಿಸುತ್ತಾರೆ. ಈ ಸಂದರ್ಭದಲ್ಲಿ ಗತಿಸಿಹೋದ ಹಿರಿಯರನ್ನು ಶ್ರದ್ಧೆ-ಭಕ್ತಿಗಳಿಂದ ಸತ್ಕರಿಸುತ್ತಿದ್ದೇವೆ ಎಂಬ ಭಾವನೆ ಗಾಢವಾಗಿರುವುದನ್ನು ಕಾಣಬಹುದು.

ಭೋಜನಕ್ಕಾಗಿ ಆಹ್ವಾನಿತರಿಗೆ ಎಲೆಹಾಕುವ ಮೊದಲು(ಆ ಸ್ಥಳವನ್ನು ಶುದ್ಧಿ ಮಾಡಲು) ದರ್ಭೆ, ಅತ್ತಿ ಎಲೆಗಳಿಂದ ಆ ಸ್ಥಳವನ್ನು ಶುಚಿ ಮಡುತ್ತಾರೆ. ಕೆಲವರು ಭೋಜನ ಸ್ಥಾನದಲ್ಲಿ ಸ್ವಲ್ಪ ಎಳ್ಳನ್ನು ಹಾಕುವುದು ಉಂಟು. ಪಿತೃಸ್ಥಾನದಲ್ಲಿ ಎಲೆ ಹಾಕುವ ಮೊದಲು ಆ ಸ್ಥಳವನ್ನು ಸ್ವಲ್ಪ ಅಗೆದಂತೆ ಮಾಡುತ್ತಾರೆ. ಅಂದರೆ ರಾಕ್ಷಸರು, ಪಿಶಾಚಿಗಳು ಅಲ್ಲೇನಾದರೊ ಇದ್ದರೆ ಆ ಜಾಗವನ್ನು ಬಿಟ್ಟುಹೋಗಲಿ ಎಂಬ ಭಾವನೆಯಿಂದ ಹೀಗೆ ಮಾಡಲಾಗುತ್ತದೆ. ಅನಂತರ ಗಾಯಿತ್ರಿಮಂತ್ರವನ್ನು ಹೇಳಿಕೊಂಡು ಅಡಿಗೆಯ ಎಲ್ಲಾ ಪದಾರ್ಥಗಳನ್ನೂ ಪ್ರೋಕ್ಷಿಸುತ್ತಾರೆ. ಅನಂತರ ಅಹ್ವಾನಿತರನ್ನು ಉದ್ದೇಶಿಸಿ" ಸ್ವಾಮಿ ಈ ದಿನ ಮನೆಯಲ್ಲಿ ನಾನು ತಂದಿರುವ ಶಾಕಪಾಕಾದಿ ಪದಾರ್ಥಗಳು, ಶ್ರಾದ್ಧಾರ್ಹವಾಗಲಿ, ಪವಿತ್ರಗೊಳಿಸಲ್ಪಟ್ಟಂತಾಗಲಿ ಎಂದು ಅನುಗ್ರಹಿಸಬೇಕೆಂದು ಕೇಳಿಕೊಳ್ಳುತ್ತಾರೆ.

ನಾಲ್ಕೈದು ದರ್ಭೆಗಳನ್ನು ತೆಗೆದುಕೊಂಡು ವಿಶ್ವ ದೇವರ ಸ್ಥಾನದಲ್ಲಿ ಇಗೋ ನಿಮಗೆ ಆಸನವನ್ನು ಕೊಡುತ್ತಿದ್ದೇನೆ ಎಂದು ಹೇಳಿ ಆಹ್ವಾನಿತರಲ್ಲಿ ವಿಶ್ವದೇವರನ್ನು ಆವಾಹನೆ ಮಾಡುತ್ತಾರೆ. "ವಿಶ್ವದೇವರೆ ನನ್ನ ಪ್ರಾರ್ಥನೆಯನ್ನು ಕೇಳಿ, ಇಲ್ಲಿ ಬಂದು ಸಂತೋಷಪಡಿ" ಎಂದು ಹೇಳುವರು. ಅವರಿಗೆ ಅರ್ಘ್ಯವನ್ನು, ಗಂಧವನ್ನು ನೀಡುತ್ತಾರೆ. ಅಂತೆಯೇ ಅಕ್ಷತೆ, ತುಳಸಿ, ದರ್ಭೆಗಳನ್ನು ಕೊಡುತ್ತಾರೆ. ಇದನ್ನು ಕೊಡುವುದು ಅಲಂಕಾರಣಾರ್ಥವಾಗಿ ಅಕ್ಷತೆಯಿಂದ ಅರ್ಜಿಸಿ

ಅವರನ್ನು ಆರಾಧಿಸಲಾಗುತ್ತದೆ. ವಿಶ್ವದೇವ ವಿಷ್ಣುವನ್ನು ಪೂರ್ವಾಭಿಮುಖವಾಗಿಯೂ, ಪಿತೃಗಳನ್ನು ಉತ್ತರಾಭಿಮುಖವಾಗಿಯೂ ಕೂರಿಸಿ ಊಟ ಬಡಿಸುತ್ತಾರೆ. ಎಲ್ಲವನ್ನೂ ಬಡಿಸಿದ ಅನಂತರ ಅದರ ಮೇಲೆ ತುಳಸಿದಳಗಳನ್ನು ಎಲ್ಲಾ ಎಲೆಗಳ ಮೇಲೂ ಹಾಕಲಾಗುತ್ತದೆ. ಆಹ್ವಾನಿತರ ಬೆರಳಿನಿಂದ ಎಲ್ಲಾ ಪದಾರ್ಥಗಳನ್ನು ಮುಟ್ಟಿಸುವುದು ಉಂಟು. ಊಟವಾದ ನಂತರ ನಿಮಗೆ ಭೋಜನಾದಿಗಳಿಂದ ತೊಂದರೆಕೊಟ್ಟಿದ್ದರೆ ಅದನ್ನು ಮರೆತು ನಮ್ಮನ್ನು ಕ್ಷಮಿಸಿ ಎಂದು ಪ್ರಾರ್ಥಿಸುತ್ತಾರೆ. ಕಡೆಯಲ್ಲಿ ಆಹ್ವಾನಿತರಿಗೆ ತಾಂಬೂಲ ನೀಡಿ ಅವರಿಗೆ ನಮಸ್ಕರಿಸಿ ಅವರ ಆಶೀರ್ವಾದವನ್ನು ಪಡೆಯುತ್ತಾರೆ. ಅನಂತರದ್ದು ಪಿಂಡಪ್ರದಾನದ ಕಾರ್ಯಕ್ರಮ. ಇದು ಪಿತೃಗಳಿಗೆ ನೀಡುವಂಥದ್ದು. 'ಪಿಂಡ'ವೆಂದರೆ ಅನ್ನದ ಉಂಡೆಗಳು ಅನ್ನದೊಂದಿಗೆ ಎಳ್ಳುನೀರನ್ನು ಸೇರಿಸಿ ಕಲಸಿ ಮೂರು ಉಂಡೆಗಳಾಗಿ ಮಾಡುತ್ತಾರೆ. ಇವುಗಳನ್ನು ಪಿತೃ, ಪಿತಾಮಹಾ, ಪ್ರತೀತಮಹಾರೆಂದು ಭಾವಿಸಲಾಗುತ್ತದೆ. ಆದ್ದರಿಂದಲೇ ಪಿಂಡ ಪ್ರದಾನಕ್ಕೆ ಮೊದಲು ಅವುಗಳಿಗೆ ಅಕ್ಷತೆ, ಎಳ್ಳು, ದರ್ಭೆ, ತುಳಸಿ, ಗಂಧಗಳಿಂದ ಪೂಜೆ ಮಾಡಿ ಪಿಂಡದೇವತೆಗಳಿಗೂ ನೈವೇದ್ಯ ಮಾಡುತ್ತಾರೆ.

ಪಿತೃಗಳನ್ನು ಅವರ ಲೋಕಕ್ಕೆ ಮರಳಿ ಕಳುಹಿಸಲು ಈ ಕಾರ್ಯ ಮಾಡುತ್ತಾರೆ. ಮೊದಲು ಪಿಂಡಗಳನ್ನು ದರ್ಭೆಗಳ ಮೇಲೆ ಇಡಲಾಗುತ್ತದೆ. ಪಿತೃಗಳನ್ನು ಅಲ್ಲಿಂದ ಎಬ್ಬಿಸುವ ಸಲುವಾಗಿ ದರ್ಭೆಗಳನ್ನು ಸ್ವಲ್ಪ ಎಳೆದಂತೆ ಮಾಡುತ್ತಾರೆ. ಪಿತೃಗಳೇ ನಿಮ್ಮ ನಿಮ್ಮ ಮಾರ್ಗದಿಂದ ನಿಮ್ಮ ಲೋಕಕ್ಕೆ ಮರಳಿ ಹೋಗಿ ನಮಗೆ ಸಕಲೈಶ್ವರ್ಯಗಳನ್ನು ಅನುಗ್ರಹಿಸಿ ಎಂದು ಹೇಳುತ್ತಾರೆ. ಅನಂತರ ಆ ಪಿಂಡಗಳನ್ನು ಬಾಳೆಯ ಎಲೆಯ ಮೇಲಿಟ್ಟು ಮಹಡಿಯ ಮೇಲೊ ಅಥವಾ ಹೊರಗಡೆಯೋ ಇಡುತ್ತಾರೆ. ಈ ಪಿಂಡಗಳನ್ನು ಕಾಗೆಗಳು ಬಂದು ಸ್ವೀಕರಿಸಿದರೆ ತಾವು ಮಾಡಿದ ಶ್ರಾದ್ದ ಕಾರ್ಯಗಳು ಪಿತೃಗಳಿಗೆ ಇಷ್ಟವಾಗಿದೆ ಎಂದು ತಿಳಿಯಬಹುದಾಗಿದೆ. ಪಿಂಡದೊಂದಿಗೆ ಇಟ್ಟಿದ್ದ ಭಕ್ಷ್ಯಗಳನ್ನು ಪ್ರಸಾದವೆಂದು ಮನೆಯವರೆಲ್ಲರೂ ಸ್ವೀಕರಿಸುತ್ತಾರೆ. ಉಳಿದೆರಡು ಪಿಂಡಗಳನ್ನು ಹಸುವಿಗೆ ನೀಡುತ್ತಾರೆ. ಶ್ರಾದ್ಧವನ್ನು ಮಧ್ಯಾಹ್ನದ ವೇಳೆ ಆಚರಿಸುತ್ತಾರೆ. ಹಾಗೂ ಶ್ರಾದ್ಧ ಮಾಡುವವರು ದಿನವಿಡೀ ಉಪವಾಸ ಇರುತ್ತಾರೆ. ಅಂತಿಮವಾಗಿ ಕರ್ತೃ ಕೃಷ್ಣನನ್ನು ಸ್ಮರಿಸುವುದರ ಮೂಲಕ ಶ್ರಾದ್ಧ ರೂಪದಲ್ಲಿ ಮಹಾಲಯ ಶ್ರಾದ್ಧವೆಂದು ಇದನ್ನು ಪಿತೃಪಕ್ಷ ಎಂತಲೂ ಕರೆಯುತ್ತಾರೆ. ನಾಂದಿ ಶ್ರಾದ್ಧವನ್ನು ಮನೆಯಲ್ಲಿ ಮಂಗಳಕಾರ್ಯ ನಡೆಯುವಾಗ

ಮಾಡುತ್ತಾರೆ. ಶ್ರಾದ್ಧದ ಆಚರಣೆ ಸಂಪೂರ್ಣ ಮಾನಸಿಕ ನಂಬಿಕೆಯ ಮೇಲೆ ನಿಂತಿರುವ ಆಚರಣೆಯಾಗಿದೆ. ದಿವಂಗತರಾದವರನ್ನು ಇಂದಿಗೂ ಸ್ಮರಿಸಿಕೊಂಡು ಅವರಿಗೆ ಗೌರವ ತೋರಿಸುವ ಸಲುವಾಗಿ ಮಾಡುವ ಆಚರಣೆಯೇ ಶ್ರಾದ್ಧ.

# ಆರ್ಥಿಕ ಮತ್ತು ಶೈಕ್ಷಣಿಕ ವ್ಯವಸ್ಥೆಯಲ್ಲಿ ರಾಮನಾಥಪುರ –೬

ಒಂದು ಪ್ರದೇಶ ಸಮೃದ್ಧಿಯಾಗಿರಲು ಅಲ್ಲಿನ ಆರ್ಥಿಕ ಸ್ಥಿತಿಗತಿಗಳು, ಆದಾಯದ ಮೂಲಗಳು ಪ್ರಮುಖ ಕಾರಣವೆನಿಸುತ್ತವೆ. ರಾಮನಾಥಪುರದ ಆರ್ಥಿಕ ಸ್ಥಿತಿಗತಿಗಳನ್ನು ಗಮನಿಸಿದಾಗ ಜನರ ಸ್ಥಿತಿ ಉತ್ತಮವಾಗಿರುವುದು ಕಂಡು ಬರುತ್ತದೆ. ಇಲ್ಲಿನ ಜನರ ಪ್ರಮುಖ ಉದ್ಯೋಗ ಬೇಸಾಯ. ಇಲ್ಲಿ ಬ್ರಾಹ್ಮಣರು ಸಹ ವ್ಯವಸಾಯ ಮಾಡುವುದು ವಿಶೇಷ ಸಂಗತಿ. ಅವರೇ ತಮ್ಮ ಹೊಲಗಳನ್ನು ಉಳುಮೆ ಮಾಡುವುದರ ಜೊತೆಗೆ ಅವಶ್ಯವಿದ್ದಾಗ ಇತರೆ ಹೊಲಗಳಲ್ಲೂ ಕೆಲಸ ಮಾಡುತ್ತಾರೆ. ಎಲ್ಲರಿಗೂ ಅಡಕೆ ಮತ್ತು ತೆಂಗಿನ ತೋಟಗಳಿವೆ. ಕಾವೇರಿ ನದಿ ಹರಿಯುತ್ತಿರುವುದರಿಂದ ಇವರ ವ್ಯವಸಾಯಕ್ಕೆ ಸಾಕಷ್ಟು ಅನುಕೂಲವಾಗಿದ್ದು ಬತ್ತದ ಬೆಳೆಗೆ ಪ್ರಸಿದ್ಧಿ ಹೊಂದಿದ್ದು 'ಬತ್ತದ ಕಣಜ'ವೆಂದೇ ಪ್ರಸಿದ್ಧಿ ಪಡೆದಿದೆ.

ಬ್ರಾಹ್ಮಣರು ತಮ್ಮ ಬೇಸಾಯದಲ್ಲಿ ಇತರೆ ಕೆಲವು ಶ್ರಮಿಕವರ್ಗದವರನ್ನು ಕೆಲಸಕ್ಕೆ ನೇಮಿಸಿಕೊಳ್ಳುತ್ತಾರೆ. ಇವರಲ್ಲಿ ಸಾಮಾನ್ಯವಾಗಿ ವಿದ್ಯಾವಂತರು ಅಧಿಕವಾಗಿದ್ದು ಅವರೆಲ್ಲ ಕೆಲಸಪಡೆದು ನಗರಗಳಲ್ಲಿ ನೆಲೆಸಿದ್ದಾರೆ. ಬ್ರಾಹ್ಮಣವರ್ಗದ ಹಲವಾರುಮಂದಿ ಅಯ್ಯಂಗಾರ್ ಬೇಕರಿಗಳನ್ನು ರಾಜ್ಯದ ವಿವಿಧೆಡೆ ಇಟ್ಟುಕೊಂಡಿರುವುದನ್ನು ಕಾಣಬಹುದು. ಇಲ್ಲಿಯ ಜನ ಬಹುತೇಕ ವ್ಯವಸಾಯವನ್ನು ಅವಲಂಬಿಸಿದ್ದು ಇವರೆಲ್ಲಾ ವಾಣಿಜ್ಯ ಬೆಳೆಯಾದ ತಂಬಾಕನ್ನು ಹೆಚ್ಚಾಗಿ ಬೆಳೆಯುತ್ತಾರೆ. ಈ ತಂಬಾಕಿನಲ್ಲಿ ಬೆಳೆಯ ಉತ್ಕೃಷ್ಟತೆಗನುಗುಣವಾಗಿ ಮೂರು ರೀತಿಯ ವಿಭಾಗಗಳನ್ನು ಮಾಡಿ ಒಳ್ಳೆಯ ಬೆಲೆ ಪಡೆಯುತ್ತಾರೆ. ಇಲ್ಲಿನ ರೈತರಿಗೆ ಅನುಕೂಲವಾಗುವಂತೆ ರಾಮನಾಥಪುರದಲ್ಲಿ 'ತಂಬಾಕು ಮಂಡಳಿ' ಇದ್ದು ರೈತರು ತಾವು ಬೆಳೆದ ತಂಬಾಕನ್ನು ಇಲ್ಲಿಗೆ ತಂದು ಮಾರಾಟ ಮಾಡುತ್ತಾರೆ. ಈ ತಂಬಾಕು ಮಂಡಳಿ ಸ್ಥಳೀಯ ಯುವಕರಿಗೆ ಹತ್ತು ಹಲವು ಉದ್ಯೋಗಗಳನ್ನು ಕಲ್ಪಿಸಿಕೊಟ್ಟಿದೆ.

ರಾಮನಾಥಪುರದಲ್ಲಿ ಪ್ರತಿ ಸೋಮವಾರ ಸಂತೆ ನಡೆಯುತ್ತದೆ. ಇಲ್ಲಿಗೆ ಸುತ್ತ ಮುತ್ತಲ ಗ್ರಾಮದವರು ಬರುವುದರಿಂದ ರೈತರು ತಾವು ಬೆಳೆದ ತರಕಾರಿಗಳನ್ನು, ಸರಕುಗಳನ್ನು,

ಜಾನುವಾರುಗಳನ್ನು ಮಾರಾಟ ಮಾಡಲು ವೇದಿಕೆಯಾಗಿದೆ. ಇತ್ತೀಚಿನ ದಿನಗಳಲ್ಲಿ ಈ ಸಂತೆ ಹೆಚ್ಚಿನ ಆರ್ಥಿಕ ವಹಿವಾಟಿಗೆ ಹೆಸರುವಾಸಿಯಾಗಿದೆ. ಪ್ರತಿವಾರ ಲಕ್ಷಾಂತರ ರೂ ವ್ಯಾಪಾರ ನಡೆಯುತ್ತಿರುವುದನ್ನು ನಾವು ಕಾಣಬಹುದು. ಈ ಸಂತೆಯಲ್ಲಿ ತರಕಾರಿ, ದಿನಸಿ, ದವಸ, ಧಾನ್ಯಗಳನ್ನು ಮಾರಾಟ ಮಾಡುವುದಕ್ಕಿಂತ ಆಡು,ಕುರಿ,ಎಮ್ಮೆ ಹಸು,ಎತ್ತುಗಳ ಮಾರಾಟ ರೂಢಿಯಲ್ಲಿದೆ. ಬಹಳ ದೂರದೂರಿನಿಂದ ಬಂದು ಇಲ್ಲಿ ರಾಸುಗಳನ್ನು ಕೊಂಡು ಹೋಗುತ್ತಾರೆ.

ರಾಮನಾಥಪುರದಲ್ಲಿ ಜನರು ತಮ್ಮ ಸೌಲಭ್ಯಕ್ಕೆ ತಕ್ಕಂತೆ ಮನೆಗಳನ್ನು ಕಟ್ಟಿಕೊಂಡಿದ್ದಾರೆ. ತೊಟ್ಟಿ ಮನೆಗಳನ್ನು ರೈತರು ಹೆಚ್ಚಾಗಿ ಹೊಂದಿದ್ದಾರೆ. ಬ್ರಾಹ್ಮಣರು ಸೀಮೆ ಹೆಂಚು ನಾಟಿ ಹೆಂಚಿನ ಮನೆಗಳನ್ನು ಹೊಂದಿದ್ದಾರೆ. ಇತ್ತೀಚಿನ ದಿನಗಳಲ್ಲಿ ತಾರಸಿಯಮನೆಗಳು ಹೆಚ್ಚಾಗಿ ನಿರ್ಮಾಣವಾತ್ತಿರುವುದನ್ನು ಕಾಣಬಹುದು. ಬ್ರಾಹ್ಮಣರು ಮಾತ್ರ ತಮ್ಮ ಹಳೆಯ ಮನೆಗಳಲ್ಲೇ ವಾಸಮಾಡುತ್ತಿರುವುದನ್ನು ಕಾಣಬಹುದು.

ಕಾವೇರಿ ನದಿ ಇಲ್ಲಿ ಹರಿಯುವುದರಿಂದ ರೈತರೆಲ್ಲಾ ನೆಮ್ಮದಿಯಾಗಿದ್ದಾರೆ. ಇವರಿಗೆ ಬರಗಾಲದ ಛಾಯೆ ಯಾವ ಹಂತದಲ್ಲೂ ಕಾಣುವುದಿಲ್ಲ. ಹೇರಳವಾಗಿ ನೀರು ಇರುವುದರಿಂದ ವ್ಯವಸಾಯಕ್ಕೆ ಯಾವುದೇ ರೀತಿಯ ತೊಂದರೆಗಳು ಎದುರಾಗಿಲ್ಲ. ರೈತರು ಆಧುನಿಕ ನಾಗರಿಕತೆಯ ಸ್ಪರ್ಶದಿಂದ ಯಂತ್ರೋಪಕರಣಗಳ ಬಳಕೆಯನ್ನು ವ್ಯವಸಾಯದಲ್ಲಿ ಕಾಣಬಹುದು. ಉಳುಮೆಗಾಗಿ ಟ್ರಾಕ್ಟರ್ ಬಳಸುವುದನ್ನು ಅಲ್ಲಲ್ಲಿ ಕಾಣಬಹುದು. ಬತ್ತದ ತಳಿಯಲ್ಲಿ ಹೊಸಹೊಸ ತಳಿಗಳನ್ನು ಬಳಸಿ ಅಧಿಕ ಇಳುವರಿ ಕೊಡುವ ಬತ್ತ ಬೆಳೆದು ರೈತರು ಅಧಿಕ ಲಾಭ ಗಳಿಸುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಇಲ್ಲಿನ ಜನರ ಸ್ಥಿತಿಗತಿಗಳು ಉತ್ತಮವಾಗಿವೆ.

ಪ್ರತಿ ವರ್ಷ ಜಾತ್ರೆ ನಡೆಯುವುದರಿಂದ ಆರ್ಥಿಕ ವಹಿವಾಟು ಚೆನ್ನಾಗಿ ಜರುಗುತ್ತವೆ. ಒಂದು ತಿಂಗಳ ಕಾಲ ಅಂಗಡಿ ಮುಂಗಟ್ಟುಗಳು ನಿರಂತರವಾಗಿ ತೆರೆದಿದ್ದು ಆರ್ಥಿಕವಾಗಿ ಲಾಭ ಗಳಿಸುತ್ತವೆ. ಈ ಸಂದರ್ಭದಲ್ಲಿ ಹೊರಗಿನ ಜನರು ಅಧಿಕವಾಗಿ ಬರುವುದರಿಂದ ಹೋಟೆಲ್‌ಗಳಿಗೆ ಒಳ್ಳೆಯ ವ್ಯಾಪಾರವಾಗುತ್ತದೆ. ಇಲ್ಲಿನ ಶಾಂತಿಯುತವಾದ ವಾತಾವರಣ ಹೊರಗಿನ ಜನರು ಇಲ್ಲಿ ಬಂದು ನೆಲೆಸಲು ಕಾರಣವಾಗಿದೆ. ಇದರಿಂದಾಗಿ ಅಕ್ಕ ಪಕ್ಕದ ಉದ್ಯೋಗ ನಿರತ ಕುಟುಂಬಗಳು ಸರ್ಕಾರಿ ಕೆಲಸದವರು ರಾಮನಾಥಪುರದ ಕಡೆಗೆ ವಲಸೆ ಬರುತ್ತಾರೆ.

ಒಟ್ಟಾರೆಯಾಗಿ ರಾಮನಾಥಪುರ ಆರ್ಥಿಕವಾಗಿ ಸುಭಿಕ್ಷೆಯಿಂದಿದೆ. ಎಲ್ಲಾಕುಟುಂಬದವರ ಆರ್ಥಿಕ ಮಟ್ಟ ಚೆನ್ನಾಗಿದೆ . ಇಲ್ಲಿ ಪ್ರತಿ ದಿನ ಹೊರಗಿನಿಂದ ಬರುವವರ ಸಂಖ್ಯೆ ಅಧಿಕವಾಗಿದೆ. ಶಾಲಾಕಾಲೇಜುಗಳು ಇರುವುದರಿಂದ ಹಾಗೂ ಮುಖ್ಯವಾಗಿ ಪ್ರೇಕ್ಷಣೀಯ ಸ್ಥಳವಾಗಿರುವುದರಿಂದ ರಾಮನಾಥಪುರ ದಿನೇ ದಿನ ಬೆಳೆಯುತ್ತಾ ಹೋಗುತ್ತಿದೆ. ಹೊಸದಾಗಿ ಅಂಗಡಿ ಮಳಿಗೆಗಳು ಆರಂಭವಾಗುತ್ತಿವೆ. ಇತ್ತೀಚೆಗೆ ಗ್ರಾಮಪಂಚಾಯ್ತಿ ವತಿಯಿಂದಲೂ ಮಳಿಗೆಗಳು ಆರಂಭವಾಗುತ್ತಿವೆ. ಪ್ರಮುಖ ಬಸ್ ನಿಲ್ದಾಣದ ಸುತ್ತಾ ವಾಣಿಜ್ಯ ಮಳಿಗೆಗಳಿದ್ದು ನೋಡಲು ಸುಂದರವಾಗಿ ಕಾಣುತ್ತವೆ. ಈ ದಕ್ಷಿಣಕಾಶಿಗೆ ಇತ್ತೀಚಿನ ದಿನಗಳಲ್ಲಿ ರಾಜ್ಯಸರ್ಕಾರ ಸಹ ರಾಮನಾಥಪುರ ಅಭಿವೃದ್ಧಿಗೆ ಹತ್ತು ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು ಸಂತೋಷಕರ ವಿಷಯ.

**ಶೈಕ್ಷಣಿಕ ವ್ಯವಸ್ಥೆ:-**

ನಾಗರಿಕ ಸಮಾಜದ ನಿರ್ಮಾಣಕ್ಕೆ ವಿದ್ಯಾವಂತರ ಕೊಡುಗೆ ಅತ್ಯವಶ್ಯಕ. ಇಂತಹ ವಿದ್ಯಾವಂತರ ನಿರ್ಮಾಣಕ್ಕೆಂದು ರಾಮನಾಥಪುರದಲ್ಲಿ ಶೈಕ್ಷಣಿಕವಾಗಿ ಹಲವು ಚಟುವಟಿಕೆಗಳು ವರ್ಷಪೂರ್ತಿ ನಿರಂತರವಾಗಿ ನಡೆಯುವುದನ್ನು ಕಾಣುತ್ತೇವೆ. ಇದರ ಫಲವಾಗಿಯೇ ಇಂದು ರಾಮನಾಥಪುರದ ಹಲವು ಮಂದಿ ರಾಜ್ಯದ ವಿವಿಧ ಉನ್ನತ ಹುದ್ದೆಗಳನ್ನು ಅಲಂಕರಿಸಿರುವುದನ್ನು ಕಾಣಬಹುದು.

ಬಹಳ ಹಿಂದೆಯೆ ವಿ.ಎನ್.ಸಾಲಿಗ್ರಾಂ ರವರು ಶೈಕ್ಷಣಿಕವಾಗಿ ರಾಮನಾಥಪುರವನ್ನು ಅಭಿವೃದ್ಧಿ ಪಡಿಸಿಲೆಂದು ಬ.ಎಂ. ಶೆಟ್ಟಿ ಕಾಲೇಜನ್ನು ಮಂಜೂರುಮಾಡಿಸಿದರು. ಆದರೆ ಅದು ಕಾರಣಾಂತರಗಳಿಂದ ಪ್ರಸ್ತುತ ಕೊಣನೂರಿನಲ್ಲಿದೆ.

ಈಗ ರಾಮನಾಥಪುರದಲ್ಲಿ ಮೂರು ಪ್ರೌಢಶಾಲೆಗಳಿವೆ. ಇದರಲ್ಲಿ ಎರಡು ಅನುದಾನ ರಹಿತ ಶಾಲೆಗಳಾದ ವೆಂಕಟೇಶ್ವರ ಮತ್ತು ಪಟ್ಟಾಭಿರಾಮ ಪ್ರೌಢಶಾಲೆಗಳಿವೆ. ಜೆ.ಎಸ್.ಎಸ್ ವಿದ್ಯಾಸಂಸ್ಥೆ ಅನುದಾನಿತ ಪ್ರೌಢಶಾಲೆಯಾಗಿದೆ. ಇದಲ್ಲದೆ ಒಂದು ಖಾಸಗಿ ವೆಂಕಟೇಶ್ವರ ಐ.ಟಿ.ಐ. ಕಾಲೇಜಿನ ಜೊತೆಗೆ ಎರಡು ಪದವಿಪೂರ್ವ ಕಾಲೇಜುಗಳಿವೆ.

ಸರ್ಕಾರಿ ಹಿರಿಯ ಪ್ರಾಥಮಿಕ ಪಾಠಶಾಲೆಯಲ್ಲಿ 'ಅಜೀಂ ಪ್ರೇಮ್‌ಜಿ' ನೀಡಿರುವ ಐದು ಗಣಕ ಯಂತ್ರಗಳು ಅಲ್ಲಿನ ವಿದ್ಯಾರ್ಥಿಗಳ ವ್ಯಾಸಾಂಗಕ್ಕೆ ಸಹಕಾರಿಯಾಗಿದೆ. ರಾಮನಾಥಪುರದಲ್ಲಿ ಶಿಕ್ಷಕ ಸಂಯೋಜಕ ಕಛೇರಿಯಿದೆ. ಇದರ ಆಶ್ರಯದಲ್ಲಿ ಹಲವು ಉತ್ತಮ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.

ರಾಮನಾಥಪುರದಲ್ಲಿ ಬ್ರಾಹ್ಮಣರು ಅಧಿಕವಾಗಿರುವುದರಿಂದ ಹಾಗೂ ಇವರಲ್ಲಿ ಸಂಸ್ಕೃತಾಭ್ಯಾಸ ಈ ಹಿಂದೆ ಕಡ್ಡಾಯವಾಗಿದ್ದರಿಂದ ಮುಳ್ಳೂರು ವಿದ್ವಾನ್ ರಾಮಸ್ವಾಮಿ ಅವರು ರಾಮನಾಥಪುರದಲ್ಲಿ ಸಂಸ್ಕೃತ ಪಾಠಶಾಲೆಯನ್ನು ತೆರೆದರು. ಅದು ಇಂದಿಗೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದ್ದು, ನುರಿತ ಸಂಸ್ಕೃತ ಪಂಡಿತರನ್ನು ಹೊಂದಿದೆ. ಈ ಪಾಠಶಾಲೆಗೆ ಎಲ್ಲಾ ವರ್ಗದವರಿಗೂ ಪ್ರವೇಶವಿದೆ. ವಿದ್ವತ್ ಪೂರ್ವದವರೆಗೆ ಇಲ್ಲಿ ಪಾಠ ಹೇಳಿಕೊಡಲಾಗುತ್ತದೆ. ಇಲ್ಲಿನ ಅನೇಕ ಸಂಸ್ಕೃತ ಪಂಡಿತರು ಹಲವಾರು ಸಾಧನೆ ಗೈದಿದ್ದಾರೆ. ದೇವಕಿ ಸುಬ್ರಹ್ಮಣ್ಯ ಭಟ್ಟರು ಲಲಿತಾ ಸಹಸ್ರನಾಮವನ್ನು ಕನ್ನಡದಲ್ಲಿ ಅನುವಾದಿಸಿದ್ದಾರೆ. ಡಾ.ಡಿ.ಎಸ್.ನರಸಿಂಹಭಟ್ಟರು ಚಿಕಾಗೊ ವಿಶ್ವವಿದ್ಯಾನಿಲಯದ ಡಾಕ್ಟರೇಟ್ ಪದವಿ ಪಡೆದಿದ್ದಾರೆ. ಚತುರ್ಭಾಷಾ ಪಂಡಿತರಾದ ಕೋಯಿಲ್ಲಾ ಕೃಷ್ಣಯ್ಯಂಕಾರ್, ಕೆ.ಜೆ.ಸುಬ್ರಹ್ಮಣ್ಯ ಶಾಸ್ತ್ರಿಗಳು ಮುಳ್ಳೂರು ರಾಮಸ್ವಾಮಿ ಅಯ್ಯಂಗಾರ್ ಮುಂತಾದವರು ಸಂಸ್ಕೃತ ಕ್ಷೇತ್ರಕ್ಕೆ ಗಣನೀಯ ಸೇವೆ ಸಲ್ಲಿಸಿರುವುದನ್ನು ಸ್ಮರಿಸಬಹುದು.

ಇಲ್ಲಿನ ಸಾಕ್ಷರತೆಯನ್ನು ಗಮನಿಸಿದಾಗ ೨೦೦೧ರ ಜನಗಣತಿಯ ಪ್ರಕಾರ ಸರಾಸರಿ ಶೇ ೬೦ ರಷ್ಟು ಪುರುಷರು, ಶೇ ೪೨ ರಷ್ಟು ಮಹಿಳೆಯರು ಮಾತ್ರ ಸಾಕ್ಷರರಾಗಿರುವುದನ್ನು ಗಮನಿಸಿದಾಗ ಇಲ್ಲಿಯ ಸ್ಪಷ್ಟ ಚಿತ್ರಣ ದೊರಕುತ್ತದೆ. ಇದು ಹಾಸನ ಜಿಲ್ಲೆಯಲ್ಲೆ ಸಾಕ್ಷರತೆಯಲ್ಲಿ ಹಿಂದಿರುವುದು ದುರದೃಷ್ಟದ ಸಂಗತಿ.

**ರಾಮನಾಥಪುರದಲ್ಲಿರುವ ಇತರೆ ಕಛೇರಿಗಳು:-**

೨೬೦೦ ಜನಸಂಖ್ಯೆ ಹೊಂದಿರುವ ರಾಮನಾಥಪುರ ಗ್ರಾಮ ಪಂಚಾಯ್ತಿಯನ್ನು ಹೊಂದಿದ್ದು ಏಳು ಊರುಗಳು ಈ ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಒಳಪಟ್ಟಿವೆ. ಗ್ರಾಮಪಂಚಾಯ್ತಿ ಹಲವು ಕಾರ್ಯಕ್ರಮಗಳನ್ನು ಹಾಕಿಕೊಂಡು ರಾಮನಾಥಪುರವನ್ನು ಅಭಿವೃದ್ಧಿಯತ್ತ ಕೊಂಡೊಯ್ಯುತ್ತಿದೆ.

ಕುಡಿಯುವ ನೀರನ್ನು ಸಮರ್ಪಕವಾಗಿ ಎಲ್ಲರಿಗೂ ಒದಗಿಸಲಾಗುತ್ತದೆ. ಭಾಗ್ಯಜ್ಯೋತಿ ಕಾರ್ಯಕ್ರಮದ ಅಡಿಯಲ್ಲಿ ಬಡವರ ಮನೆಗಳಿಗೆ ವಿದ್ಯುತ್ ಕಲ್ಪಿಸಿಕೊಡಲಾಗಿದೆ. ವಸತಿ ನಿರಾಶ್ರಿತರಿಗೆ ಸರ್ಕಾರದ ಕಾರ್ಯಕ್ರಮಗಳ ಅಡಿಯಲ್ಲಿ ಸೂರನ್ನು ಕಲ್ಪಿಸಲಾಗುತ್ತಿದೆ.

ಹದಿನೈದು ವರ್ಷಗಳ ಹಿಂದೆಯೆ ಒಂದು ಕೇಂದ್ರ ಗ್ರಂಥಾಲಯ ಸ್ಥಾಪಿಸಲಾಗಿದ್ದು ಇಲ್ಲಿ ಸುಮಾರು ೩೩೩೦ಕ್ಕೂ ಹೆಚ್ಚು ಪುಸ್ತಕಗಳಿದ್ದು, ಒಬ್ಬ ಗ್ರಂಥಪಾಲಕರನ್ನು ಹೊಂದಿದೆಯಾದರು ಅಸಮರ್ಪಕ ಸೌಲಭ್ಯಗಳಿಂದಾಗಿ ಇದು ದುಸ್ಥಿತಿಯಲ್ಲಿದೆ. ರಾಮನಾಥಪುರದ ಸುತ್ತಮುತ್ತಲ ಗ್ರಾಮಗಳಿಗೆ ಸಮರ್ಪಕ ವಿದ್ಯುತ್ ಕಲ್ಪಿಸಿಕೊಡುವ ದೃಷ್ಠಿಯಿಂದ 'ವಿದ್ಯುತ್ ಪ್ರಸರಣ ನಿಗಮ ನಿಯಮಿತ' ಸ್ಥಾಪಿಸಿದ್ದು ಇದರಿಂದ ರೈತರ ಪಂಪ್_ಸೆಟ್ಟುಗಳಿಗೆ ಸಾಕಷ್ಟು ಅನುಕೂಲವಾಗಿದೆ. ಇದು ವಿದ್ಯುತ್ ನಿಯಂತ್ರಣಗಾರವಾಗಿ ಕಾರ್ಯ ನಿರ್ವಹಿಸುತ್ತದೆ. ಇದಕ್ಕೆ ಹೊಂದಿಕೊಂಡಂತೆ ಸರ್ಕಾರಿ ವಸತಿ ಗೃಹಗಳನ್ನು ಅಚ್ಚುಕಟ್ಟಾಗಿ ನಿರ್ಮಿಸಲಾಗಿದೆ.

ರಾಮನಾಥಪುರದಲ್ಲಿ ಅಂಚೆಕಛೇರಿಯ ಜೊತೆಗೆ ಇಲ್ಲಿನ ಜನರ ಆರೋಗ್ಯ ಸುಧಾರಣೆಗೆಂದು ಒಂದು ಆಯುರ್ವೇದಿಕ್ ಆಸ್ಪತ್ರೆ ಇದೆ. ರೈತರು ತಮ್ಮ ಹಣದ ವ್ಯವಹಾರ, ಕೃಷಿಸಾಲ, ಯಂತ್ರೋಪಕರಣಗಳ ಸಾಲ ಇತ್ಯಾದಿ ಹಣದ ವಹಿವಾಟಿಗೆಂದು ಇಲ್ಲಿರುವ ಕೆನರಾಬ್ಯಾಂಕನ್ನು ಅವಲಂಬಿಸಿದ್ದಾರೆ.

ಪ್ರತಿವಾರ ಸಂತೆ ಜರಗುವಾಗ ಜಾನುವಾರಗಳ ಮಾರಾಟದ ಭರಾಟೆ ಜೋರಾಗಿದ್ದು ಜಾನುವಾರುಗಳ ಸುರಕ್ಷತೆಗೆಂದು ಒಂದು ಸರ್ಕಾರಿ ಪಶು ಆಸ್ಪತ್ರೆ ತೆರೆಯಲಾಗಿದೆ. ಅಂತೆಯೆ ಇಲ್ಲಿನ ಹೋಟೆಲ್‌ಗಳು, ಕ್ಯಾಂಟಿನ್ಗಳು, ಮೆಸ್‌ಗಳು, ಮಾಂಸದ ಅಂಗಡಿಗಳ ವ್ಯವಸ್ಥೆ ಅಚ್ಚುಕಟ್ಟಾಗಿದೆ. ಹಿಂದೂಮಿಲ್ಟ್ರಿಹೋಟೆಲ್, ಬಾರ್‌ಗಳ ಸಂಖ್ಯೆ ಐದಕ್ಕೂ ಹೆಚ್ಚಿರುವುದನ್ನು ಕಾಣುತ್ತೇವೆ.

ಪ್ರವಾಸಿತಾಣವಾದ ರಾಮನಾಥಪುರಕ್ಕೆ ವಿವಿಧ ಪ್ರದೇಶಗಳಿಂದ ಪ್ರವಾಸಿಗರು ಬರುವುದರಿಂದ ಸಮರ್ಪಕವಾಗಿ ಬಸ್‌ಗಳ ಸೌಲಭ್ಯ ಕಲ್ಪಿಸಲೆಂದು ಒಂದು ಬಸ್‌ಡಿಪೋವನ್ನು ಸ್ಥಾಪಿಸಲಾಗಿದೆ. ಇದರಿಂದಾಗಿ ಇಲ್ಲಿ ಸಂಚಾರ ವ್ಯವಸ್ಥೆ ಸಮರ್ಪಕವಾಗಿದ್ದು ಸ್ಥಳೀಯರಿಗೆ ಹಾಗು ಪ್ರವಾಸಿಗರಿಗೆ ಸಾರಿಗೆ ವ್ಯವಸ್ಥೆಯಲ್ಲಿ ಯಾವುದೇರೀತಿಯ ತೊಂದರೆಯಾಗದಿರುವುದನ್ನು ಕಾಣುತ್ತೇವೆ.

ಈ ರೀತಿಯಾಗಿ ಸಕಲ ಸೌಲಭ್ಯಗಳನ್ನು ಹೊಂದಿದ್ದು, ಪುಣ್ಯಕ್ಷೇತ್ರವಾಗಿರುವ ಈ ದಕ್ಷಿಣ ಕಾಶಿಯಲ್ಲಿ ವಿವಾಹ ಸಮಾರಂಭಗಳು ಹೆಚ್ಚು ಜರುಗುತ್ತದೆ. ಆದ ಕಾರಣ ರಾಮನಾಥಪುರದಲ್ಲಿ ನಾಲ್ಕು ಕಲ್ಯಾಣ ಮಂಟಪಗಳನ್ನು ನಿರ್ಮಿಸಲಾಗಿದೆ. ಸುತ್ತ ಮುತ್ತಲ ಗ್ರಾಮದವರು ತಮ್ಮ ಮನೆಯ ಶುಭ ಕಾರ್ಯಕ್ರಮಗಳನ್ನು ಈ ಕಲ್ಯಾಣ ಮಂಟಪಗಳಲ್ಲೆ ಏರ್ಪಡಿಸಿಕೊಳ್ಳುತ್ತಾರೆ.

ಇದರ ಜೊತೆಗೆ ಈ ಹಿಂದೆ ಮನರಂಜನೆಗೆಂದು ಒಂದು ಚಲನಚಿತ್ರ ಮಂದಿರವನ್ನು ಸ್ಥಾಪಿಸಲಾಗಿತ್ತು. ಆದರೆ ಇಲ್ಲಿನ ಹಾಗೂ ಸುತ್ತ ಮುತ್ತಲ ಜನರೆಲ್ಲಾ ವ್ಯವಸಾಯಕ್ಕೆ ಹೆಚ್ಚು ಒತ್ತು ನೀಡುವುದರಿಂದ ಚಲನಚಿತ್ರ ಮಂದಿರ ಸಾಕಷ್ಟು ನಷ್ಟ ಅನುಭವಿಸುತ್ತಿದ್ದರಿಂದ ಪ್ರಸ್ತುತ ಅದನ್ನು ಮುಚ್ಚಲಾಗಿದೆ. ವಾಹನಗಳ ಓಡಾಟಕ್ಕೆ ಅನುಕೂಲವಾಗುವಂತೆ ಉತ್ತಮ ರಸ್ತೆಗಳನ್ನು ನಿರ್ಮಿಸಿದ್ದು ಅವುಗಳಿಗೆ ತೈಲವನ್ನು ಹಾಕಿಸಿಕೊಳ್ಳಲು ೨ ಪೆಟ್ರೋಲ್ ಬಂಕ್‌ಗಳನ್ನು ನಿರ್ಮಿಸಲಾಗಿದೆ. ಒಟ್ಟಾರೆಯಾಗಿ ರಾಮನಾಥಪುರ ಸಮರ್ಪಕವಾಗಿ ಎಲ್ಲಾ ಅಗತ್ಯ ಸೌಲಭ್ಯಗಳನ್ನು ಹೊಂದಿರುವುದನ್ನು ಸ್ಪಷ್ಟವಾಗಿ ಗಮನಿಸಬಹುದು.

## ರಾಮನಾಥಪುರ ದೇವಾಲಯಗಳ ವೈಶಿಷ್ಟ್ಯ- ೭

ಶ್ರೀ ಕ್ಷೇತ್ರ ರಾಮನಾಥಪುರದಲ್ಲಿ ಚರಿತ್ರೆಯನ್ನು, ಪುರಾಣವನ್ನು ಸಾರುವ ಹಲವಾರು ದೇವಾಲಯಗಳಿವೆ. ಒಂದು ಕ್ಷೇತ್ರದ ದೇವಾಲಯಗಳು ಆ ಕ್ಷೇತ್ರದ ಸಂಸ್ಕೃತಿಯ ಮೇಲೆ ತನ್ನದೇ ಆದ ಪ್ರಭಾವವನ್ನು ಬೀರುತ್ತವೆ. ದೇವಾಲಯಗಳನ್ನು ನಾವು ಅಧ್ಯಯನ ಮಾಡುವುದರಿಂದ ಆ ಕ್ಷೇತ್ರದ ಸಾಂಸ್ಕೃತಿಕ ಚಿತ್ರಣಕ್ಕೆ ಒಂದು ಚೌಕಟ್ಟು ಬರುತ್ತದೆ. ಕಾವೇರಿನದಿ ತಲಕಾವೇರಿಯಲ್ಲಿ ಹುಟ್ಟಿ ತಮಿಳುನಾಡಿನ ಕಾವೇರಿಪಟ್ಟಣನಲ್ಲಿ ಸಮುದ್ರ ಸೇರುವವರೆಗೂ ಹರಿವ ದಂಡೆಯೆಡೆಯಲ್ಲಿ ಪುಣ್ಯ ಕ್ಷೇತ್ರಗಳನ್ನು ನಾವು ಕಾಣುತ್ತೇವೆ.

ವೈಷ್ಣವ, ಶೈವ ಎರಡು ರೀತಿಯ ದೇವಾಲಯಗಳನ್ನು ನಾವು ಗುರುತಿಸಬಹುದಾಗಿದೆ. ಉದಾಹರಣೆಗೆಂದು ನೋಡುವುದಾದರೆ ಭಾಗಮಂಡಲ, ಕಣಿವೆ, ಕೊಡಗುಜಿಲ್ಲೆ ,ರಾಮನಾಥಪುರ, ಹಾಸನಜಿಲ್ಲೆ. ಸಾಲಿಗ್ರಾಮ, ಚುಂಚನಕಟ್ಟೆ, ಹಂಪಾಪುರ, ಮೈಸೂರು ಜಿಲ್ಲೆ, ಬಲಮುರಿ, ಕನ್ನಂಬಾಡಿ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ, ಇಲ್ಲೆಲ್ಲಾ ದೇವಾಲಯಗಳನ್ನು ನೋಡಬಹುದು. ಉತ್ತರದಲ್ಲಿ ಗಂಗೆ ಹೇಗೆ ಪವಿತ್ರಳೊ ದಕ್ಷಿಣದಲ್ಲಿ ಕಾವೇರಿ ಹಾಗೆಯೇ ಪವಿತ್ರವಾಗಿದ್ದಾಳೆ. **ದಕ್ಷಿಣಕಾಶಿ**ಯೆಂದೇ ಪ್ರಸಿದ್ಧವಾದ ರಾಮನಾಥಪುರದಲ್ಲಿ ಹಲವಾರು ದೇವಾಲಯಗಳಿವೆ ಅವುಗಳೆಂದರೆ ಶ್ರೀರಾಮೇಶ್ವರ, ಲಕ್ಷ್ಮಣೇಶ್ವರ, ಅಗಸ್ತ್ಯೇಶ್ವರ, ಸುಬ್ರಹ್ಮಣ್ಯಸ್ವಾಮಿ, ಲಕ್ಷ್ಮಿನರಸಿಂಹಸ್ವಾಮಿ, ಕನ್ನಿಕಾ ಪರಮೇಶ್ವರಿ, ಕಾಲುವೆ ಅಮ್ಮನವರ ಗುಡಿ, ವ್ಯಾಸಾಂಜನೇಯ ದೇವರು, ಪಾಣದೇವರು, ಆಂಜನೇಯ, ನರಸಿಂಹ, ಬಸವನಗುಡಿ, ಹೀಗೆ ಹಲವಾರು ದೇವಾಲಯಗಳಿದ್ದು ಒಂದೊಂದು ದೇವಾಲಯದ ಚಿತ್ರಣವನ್ನು ಸಂಕ್ಷಿಪ್ತವಾಗಿ ನೋಡಬಹುದು.

**ಚತುರ್ಯುಗ ಮೂರ್ತಿ ಶ್ರೀ ರಾಮೇಶ್ವರ:-**

ರಾಮನಾಥಪುರ ಕ್ಷೇತ್ರದಲ್ಲಿರುವ ಅತಿ ದೊಡ್ಡ ಬೃಹತ್ತಾದ ದೇವಾಲಯವಿದ್ದು ಈ ದೇವಾಲಯದ ಬಗ್ಗೆ ಇರುವ ಇತಿಹಾಸವನ್ನು ನಾವು ನೋಡುವುದಾದರೆ ಪುರಾಣಗಳ ಮೊರೆ ಹೋಗಬೇಕಾಗುತ್ತದೆ.

ಕೃತಯುಗದಲ್ಲಿ ಸಂವರ್ತಕೇಶ್ವರ, ತ್ರೇತಾಯುಗದಲ್ಲಿ ವಾಸುಕೇಶ್ವರ, ದ್ವಾಪರಯುಗದಲ್ಲಿ ವಹ್ನೀಶ್ವರ ಹಾಗೂ ಈ ಕಲಿಯುಗದಲ್ಲಿ ರಾಮೇಶ್ವರ ಎಂದು ಕರೆಸಿಕೊಳ್ಳುತ್ತಿರುವ ಹಿಂದೆ ಅಗ್ನಿಯಿಂದ ಪೂಜಿಸಲ್ಪಟ್ಟ ಶಿವಲಿಂಗವು ಚತುರ್ಯುಗ ಮೂರ್ತಿ ಎಂದೇ ಪ್ರಖ್ಯಾತ ಮೈಸೂರಿನ ಕಡೆಯಿಂದ ಹೋಗುವ ರಾಮನಾಥಪುರದಲ್ಲಿ ಸಿಗುವ ಎತ್ತರ ಗೋಪುರದ ಈ ದೇವಾಲಯದ ದ್ವಾರ ಉತ್ತರ ದಿಕ್ಕಿಗೆ ಮುಖಮಾಡಿದೆ.

ತ್ರೇತಾಯುಗದಲ್ಲಿ ಲಂಕಾಧಿಪತಿ ದಶಕಂಠ ರಾವಣನನ್ನು ಆತನ ಅಸುರ ಪರಿವಾರವನ್ನು ಲೋಕೋದ್ಧಾರಕ್ಕಾಗಿ ಸಂಹರಿಸಿದ ಶ್ರೀ ರಾಮ ಪೂಜ್ಯ ಗುರುಗಳಾದ ಬ್ರಹ್ಮಪುತ್ರ ವಸಿಷ್ಠರ ಪ್ರೇರಣೆಯಿಂದಾಗಿ ತನ್ನ ಸಕಲ ಪರಿವಾರದೊಂದಿಗೆ ಪುಷ್ಪಕವಿಮಾನದಲ್ಲಿ ವಾಸವಾಪುರ ರಾಮನಾಥಪುರಕ್ಕೆ ಬಂದಿಳಿದ. ಗುರುಗಳಾದ ವಸಿಷ್ಠರು ಮತ್ತು ಅಗಸ್ತ್ಯರ ಅಪ್ಪಣೆಯ ಮೇರೆಗೆ ಲಿಂಗಾರಾಧನೆ ಮಾಡಲು ಸಿದ್ಧನಾಗಿ ಶ್ರೇಷ್ಠನಾದ ಹನುಮಂತನನ್ನು ಕಂಡು ಪೂರ್ವದಲ್ಲಿ ರಾವಣ ಇಂದ್ರಜಿತರಿಂದ ಹತರಾದ ಸೈನ್ಯವೆಲ್ಲವೂ ನೀನು ಸಂಜೀವಿನಿ ಪರ್ವತವನ್ನು ತಂದುದರಿಂದಲೇ ಬದುಕಿದುದು ಈಗಲೂ ನಿನ್ನ ವೇಗವನ್ನು ನೋಡಬೇಕೆಂದು ಅಪೇಕ್ಷಿಸುತ್ತೇವೆ. ಆದುದರಿಂದಲೇ ಎಲೈ ಆಂಜನೇಯನೆ ಕಾಶಿ ಕ್ಷೇತ್ರದಿಂದ ಒಂದು ಲಿಂಗವನ್ನು ತೆಗೆದುಕೊಂಡು ಬಾ ಎಂದಾಗ ಮಹರ್ಷಿಗಳು ಕಾಶಿಯಿಂದ ತಂದ ಲಿಂಗವು ಶ್ರೇಷ್ಠವೆನ್ನುತ್ತಾರೆ. ಎಂದು ಹೇಳಿದ. ಈ ರೀತಿ ರಾಮಚಂದ್ರನಿಂದ ಆಜ್ಞೆ ಪಡೆದ ಹನುಮಂತ ಲಿಂಗವನ್ನು ತರಲೆಂದು ಕಾಶಿಗೆ ಪ್ರಯಾಣ ಮಾಡಿದ. ಆನಂತರದಲ್ಲಿ ಧರ್ಮಿಷ್ಠರಾದ ಅಗಸ್ತ್ಯರು ಶ್ರೀ ರಾಮನನ್ನು ಕುರಿತು ಎಲೈ ರಾಮಚಂದ್ರನೆ ಇಲ್ಲಿ ತಾನೇ ಉದ್ಭವಿಸಿರುವ ಲಿಂಗವುಂಟು ಅದನ್ನು ಹುಡುಕಿ ಅದರಲ್ಲಿ ಈಶ್ವರನನ್ನು ಅರ್ಜಿಸೆಂದು ಹೇಳಿ ಹುಡುಕಲಾರಂಭಿಸಿದರು.

ಹೀಗೆ ಹುಡುಕುತ್ತಿರುವಾಗ ಪೊದೆ ಹುತ್ತದಿಂದ ಮುಚ್ಚಲ್ಪಟ್ಟ ಪುರಾತನವೂ ಸ್ವಯಂಭೂವೂ ಆದ ಲಿಂಗವನ್ನು ಕಂಡರು. ಇದರಿಂದ ಸಂತೋಷಗೊಂಡ ಮಹರ್ಷಿಗಳು ರಾಮನನ್ನು ಕರೆದು ತೋರಿಸಿದರು. ರಾಮ ಸಂತೋಷಗೊಂಡು ಲಕ್ಷ್ಮಣನನ್ನು ಕುರಿತು ಎಲೈ ಲಕ್ಷ್ಮಣನೆ ಪೂಜ್ಯರಾದ ಅಗಸ್ತ್ಯರು ನನಗೆ ಲಿಂಗವನ್ನು ತೋರಿಸುತ್ತಾರೆ. ಮೊದಲು ಲಿಂಗವನ್ನು ಪೂಜಿಸಿ ನಚಿತರ ಗುಡಿಯನ್ನು ಕಟ್ಟಿಸುತ್ತೇನೆ. ಈ ಮಾತಿಗೆ ನಾನೆಂದೂ ತಪ್ಪುವುದಿಲ್ಲ. ಆದ್ದರಿಂದ ಪೂಜೆಗೆ ಬೇಕಾದ

ಹೂವು,ಗಂಧ,ಅಕ್ಷತೆಗಳನ್ನು ನೈವೇದ್ಯಕ್ಕೆ ಹಣ್ಣು, ಹಂಪಲುಗಳನ್ನು ತೆಗೆದುಕೊಂಡು ಬಾರೆಂದು ಅಪ್ಪಣೆ ಮಾಡಿದ ಲಕ್ಷ್ಮಣ ಪೂಜೆಯ ಸಾಮಾನುಗಳನ್ನು ತಂದ ಮೇಲೆ ಕುಲ ಗುರುಗಳಾದ ವಸಿಷ್ಠರು ಹೇಳಿದ ಪ್ರಕಾರ ಆ ಲಿಂಗಕ್ಕೆ ಪೂಜೆ ಸಲ್ಲಿಸಿದ. ವಸಿಷ್ಠರಿಂದಲೂ, ಅಗಸ್ತ್ಯರಿಂದಲೂ ಬೋಧಿತನಾದ ರಾಮ ಪೂಜಿಸಿದ್ದರಿಂದ ಆ ಲಿಂಗಕ್ಕೆ ರಾಮೇಶ್ವರನೆಂಬ ಹೆಸರಾಯಿತು. ಆ ಲಿಂಗ ವಹ್ನಿಪುಷ್ಕರಿಣಿಯ ದಡದಲ್ಲಿ ಎಂದರೆ ಕಾವೇರಿಯ ನದಿಗೆ ಉತ್ತರ ಭಾಗದ ದಡದಲ್ಲಿದೆ. ಬಲಿಷ್ಠನಾದ ಹನುಮಂತ ಈ ವೇಳೆಗೆ ಸರಿಯಾಗಿ ಬೇರೊಂದು ಲಿಂಗವನ್ನು ತೆಗೆದುಕೊಂಡು ಬಂದ ಆದರೆ ರಾಮ ಬೇರೊಂದು ಲಿಂಗವನ್ನು ಪೂಜಿಸಿರುವುದನ್ನು ನೋಡಿ ಕೋಪಗೊಂಡ, ಆಗ ರಾಮ ಎಲೈ ವಾಯುಪುತ್ರನೇ ನನ್ನ ಸಮೀಪಕ್ಕೆ ಬಾ ಕೋಪವನ್ನು ತ್ಯಜಿಸು, ನೀನು ಗಂಡಕೀ ಕ್ಷೇತ್ರದಿಂದ ತಂದಿರುವ ಆ ಲಿಂಗವನ್ನು ನನ್ನ ಮುಂದಿಡು ಆ ಲಿಂಗಕ್ಕೆ ಹನುಮಂತೇಶ್ವರ ಎಂದು ಹೆಸರಾಗಲಿ ರಾಮೇಶ್ವರವನ್ನು ದರ್ಶನ ಮಾಡುವ ಮುನ್ನ ಹನುಮಂತೇಶ್ವರನನ್ನು ದರ್ಶನ ಮಾಡಬೇಕು ಹಾಗೆ ಮಾಡದಿದ್ದಲ್ಲಿ ರಾಮೇಶ್ವರನ ದರ್ಶನದಿಂದುಂಟಾದ ಫಲವೇ ಲಭಿಸಿದೇ ಹೋಗಲಿ ಎಂದು ವರವನ್ನಿತ್ತ ಆದರೆ ವಿಪರ್ಯಾಸವೆಂದರೆ ಈ ದೇವಾಲಯದ ಬಾಗಿಲನ್ನ ಸದಾ ಮುಚ್ಚಿದ್ದು ಶ್ರೇಷ್ಠ ಪೂಜೆಯಂದು ಮಾತ್ರ ಬಾಗಿಲು ತೆಗೆಯುವುದರಿಂದ ಆ ದಿನ ಮಾತ್ರ ಹನುಮಂತೇಶ್ವರನ ದರ್ಶನದ ಭಾಗ್ಯ ದೊರಕುತ್ತದೆ. ಈ ರೀತಿಯಾಗಿ ಚತುರ್ಯುಗ ಮೂರ್ತಿ ಶ್ರೀ ರಾಮೇಶ್ವರ ಹಾಗೂ ಹನುಮಂತೇಶ್ವರ ದೇವಾಸ್ಥಾನದ ಬಗ್ಗೆ ಸ್ಥಳಿಯರಿಂದ ಮಾಹಿತಿ ದೊರಕುತ್ತದೆ.



**ಈ ದೇವಾಲಯದ ವಾಸ್ತುಶಿಲ್ಪ:-**

ವಾಸ್ತುಶಿಲ್ಪ ಕ್ಷೇತ್ರಕ್ಕೆ ಹೊಯ್ಸಳರ ಕೊಡುಗೆ ಅಪಾರವಾದುದು ಹಾಗೂ ಅವಿಸ್ಮರಣೀಯವಾದುದು. ಹೊಯ್ಸಳ ಅರಸ ೩ನೆಯ ನರಸಿಂಹನ ಕಾಲದಲ್ಲಿ ಅಂದರೆ ೧೨೪೨-೧೨೯೨ ರ ಅವಧಿಯಲ್ಲಿ ಈ ದೇವಾಲಯ ಸ್ಥಾಪನೆಯಾಗಿದೆ. ಆದರೆ ಇದಕ್ಕೆ ನಿರ್ಮಿಸಲಾಗಿರುವ ಬೃಹತ್ ಗೋಪುರವನ್ನು ವಿಜಯನಗರ ಸಾಮ್ರಾಜ್ಯದ ಅರಸರು ನಿರ್ಮಿಸಿದರೆಂದು ತಿಳಿದು ಬರುತ್ತದೆ. ಗರ್ಭ ಗುಡಿಯ ನೇರದಲ್ಲಿ ನಂದಿ ಕಂಭವಿದೆ. ಅಲ್ಲಿ ನಂದಿ ಮತ್ತು ಭೃಂಗಿ ವಿಗ್ರಹಗಳಿವೆ. ಮೊದಲ ಪ್ರಾಂಗಣದಲ್ಲಿ ಎಂಟು ಕಲ್ಲಿನ ಕಂಬ ಎಡಭಾಗದಲ್ಲಿ ನವಗ್ರಹ

ವಿಗ್ರಹಗಳಿವೆ. ಈಶ್ವರ, ಪಾರ್ವತಿ, ನಟರಾಜ ಉತ್ಸವಮೂರ್ತಿ ವಿಗ್ರಹಗಳನ್ನು ಕಾಣಬಹುದು. ಎರಡನೇ ಪ್ರಾಂಗಣವು ೧೪ ಕಂಬಗಳಿಂದ ಕೂಡಿದ್ದು ವಿಶಾಲವಾಗಿದೆ. ಈ ದೇವಾಲಯವು ತ್ರಿಕೂಟ ಅಂದರೆ ೩ ಗರ್ಭಗೃಹಗಳಿರುವ ದೇವಾಲಯ ಗರ್ಭಗುಡಿಯ ಮೇಲೆ ನಕ್ಷತ್ರಾಕಾರದಲ್ಲಿ ಮೇಲೇರುವ ಗೋಪುರವಿದೆ. ಸುಕನಾಸಿ, ಅಪೂರ್ವ ಕಲಾಕುಸುರಿಯ ಭುವನೇಶ್ವರಿ, ಬಳಪದ ಕಲ್ಲುಗಳಿಂದ ನಿರ್ಮಿತವಾದ ಒಂಭತ್ತು ಅಂಕಣ ಹೊಂದಿರುವ ನವರಂಗದಲ್ಲಿ ಮನೋಹರವಾದ ಸ್ತಂಭಗಳು ಹೊಯ್ಸಳ ಶಿಖರದ ಮುಂದೆ ಸಳ ವ್ಯಾಘ್ರಗಳ ಲಾಂಛನಗಳು ಸೋಮ ದಂಡನಾಯಕನಿಂದ ನಿರ್ಮಿಸಲ್ಪಟ್ಟವು. ಈ ದೇವಾಲಯದಲ್ಲಿ ಹೊಯ್ಸಳ ಕಾಲದ ವೇಣುಗೋಪಾಲಸ್ವಾಮಿಯ ವಿಗ್ರಹವಿದೆ.

ಈ ದೇವಾಸ್ಥಾನದಲ್ಲಿ ಮಹಿಷಮರ್ದಿನಿ, ಭೈರವ, ಕೇಶವ, ಸೂರ್ಯವಿಗ್ರಹ, ಮಹಾಗಣಪತಿ, ದಕ್ಷಿಣಮೂರ್ತಿ, ಚಂಡಿಕೇಶ್ವರ, ತಾಂಡವೇಶ್ವರ, ಸದಾಶಿವ ಮತ್ತು ನವಗ್ರಹ ಮೂರ್ತಿಗಳಿವೆ. ರಾಮೇಶ್ವರನ ಎಡಬಲ ಮತ್ತು ಹಿಂಬದಿಯಲ್ಲಿ ಸದ್ಯೋಜಾತೇಶ್ವರ, ವಾಯದೇವೇಶ್ವರ, ಅಘೋರೇಶ್ವರ, ತತ್ಪುರುಷೇಶ್ವರ, ಉಮಾಕಾಂತೇಶ್ವರ, ಅರ್ಕೇಶ್ವರ, ವೈದ್ಯೇಶ್ವರ, ಗಂಗಾವಿಶ್ವೇಶ್ವರ, ಅರುಣಾಚಲೇಶ್ವರ, ಈಶಾನೇಶ್ವರ, ಭವಾನಿಶಂಕರೇಶ್ವರ, ಕಾಳಹಸ್ತೀಶ್ವರ, ಇನ್ನೂ ಮುಂತಾದ ನಾಮಾಂಕಿತದಿಂದ ಅನೇಕ ಭಕ್ತರು ೧೮-೧೯ನೇ ಶತಮಾನಗಳ ಶಿವಲಿಂಗಗಳನ್ನು ಸ್ಥಾಪಿಸಿದ್ದಾರೆ. ಈ ದೇವಾಲಯಕ್ಕೆ ಕ್ರಿ.ಶ ೧೨೭೫ರಲ್ಲಿ ವೀರನರಸಿಂಹ ದೇವರಹಳ್ಳಿ ಯನ್ನು ಉಂಬಳಿಯಾಗಿ ನೀಡಿದ್ದಾನೆ. ಭಕ್ತಾದಿಗಳ ಸಹಕಾರದಿಂದ ಈಗ ದೇವಾಲಯದ ಮುಂಭಾಗದಲ್ಲಿ ಐದು ಅಂತಸ್ತಿನ ಬೃಹತ್ತಾದ ಗೋಪುರ ನಿರ್ಮಾಣವಾಗುತ್ತಿದೆ. ವೇಸರ ಶೈಲಿಯಲ್ಲಿ ಈ ದೇವಾಲಯ ನಿರ್ಮಾಣಗೊಂಡಿದೆ. ಇದರ ಶಿಲ್ಪಿ ತಮಿಳುನಾಡಿನ ಮೂಲದ ಗಣೇಶ ಎಂಬ ೮೫ ವರ್ಷದ ವ್ಯಕ್ತಿ. ಸಿಮೆಂಟ್ ಗಾರೆಯ ಸಹಾಯದಿಂದ ಈ ಗೋಪುರ ನಿರ್ಮಾಣವಾಗುತ್ತಿದೆ. ಅನೇಕ ಭಕ್ತಾದಿಗಳು,ಬುದ್ಧಿ ಜೀವಿಗಳು ಇದರ ಏಳಿಗೆಗೆ ಸಹಾಯ ಹಸ್ತ ನೀಡಿ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದಾರೆ. ಈ ದೇವಾಲಯದಲ್ಲಿ ಗರ್ಭಗುಡಿಗೆ ನೇರವಾಗಿ ಧ್ವಜಸ್ತಂಭವಿದೆ. ಪಂಚಲೋಹದಿಂದ ಮಾಡಿರುವಂತಹುದು. ನಾಲ್ಕು ದಿಕ್ಕುಗಳಲ್ಲಿ ನಾಮ, ಗರುಡ, ಶಂಖ ಚಿತ್ರವಿರುವುದನ್ನು ಕಾಣಬಹುದು ಈ ಧ್ವಜಸ್ತಭವು ವಿಮಾನಕಳಶದ ಸಮಾನಕ್ಕೆ ಇದೆ.

ಅಂತೆಯೆ ಈ ದೇವಾಲಯ ಸಪ್ತ ದ್ವಾರಗಳನ್ನೊಳಗೊಂಡಿದೆ. ಭರತನ ಎಡಭಾಗದಲ್ಲಿ ಶತೃಘ್ನ, ಲಕ್ಷ್ಮಣರ ಮೂರ್ತಿಗಳಿವೆ. ರಾಮನ ತೊಡೆಯ ಮೇಲೆ ಸೀತೆ,ಬಲ ಭಾಗದಲ್ಲಿ ಹನುಮಂತ ಇದ್ದು, ಹೊರಗಡೆಯಿಂದ ನೋಡಿದಾಗ ಹನುಮಂತ ಮತ್ತು ಲಕ್ಷ್ಮಣರ ಮೂರ್ತಿಗಳ ಕಾಣುವುದಿಲ್ಲ ಇದಕ್ಕೆ ಕಲ್ಲು ಕಂಭಗಳು ಮರೆಯಾಗಿರುವುದು ಕಾರಣವಾಗಿದೆ.

ರಾಮನಾಥಪುರದಿಂದ ೨೫ ಕಿ.ಮೀ. ಅಂತರದಲ್ಲಿರುವ ಸಾಲಿಗ್ರಾಮದಲ್ಲಿ ಶ್ರೀ ರಾಮಾನುಜಾಚಾರ್ಯರ ಮಹಿಮೆಯನ್ನು ಬೀರಿದ ಕಲ್ಯಾಣಿ ಒಂದಿದೆ. ಈ ಕಲ್ಯಾಣಿಯಿಂದ ಆರಿದ್ರ ನಕ್ಷತ್ರದಂದು ಕಾಲು ನಡಿಗೆಯಲ್ಲಿ ಮಸ್ತಕದ ಮೇಲೆ ಹೊತ್ತು ಕುಂಭದಲ್ಲಿ ತರುವ ಶ್ರೀ ಪಾದಂಗಳ ತೀರ್ಥವನ್ನು ವೇದಘೋಷ ಮಂತ್ರ ಪೂರ್ವಕವಾಗಿ ಸಮಸ್ತ ಮರ್ಯಾದೆಗಳೊಡನೆ ಸ್ವಾಗತಿಸಿ ರಾಮಾನುಜಾಚಾರ್ಯರ ತಿರುನಕ್ಷತ್ರವನ್ನು ಈ ದೇವಸ್ಥಾನದಲ್ಲಿ ವಿಜೃಂಭಣೆಯಿಂದ ಆಚರಿಸುತ್ತಾರೆ. ಅನಂತರ ಶ್ರೀ ಪಾದ ತೀರ್ಥವನ್ನು ಭಕ್ತ ಜನರಿಗೆ ವಿನಿಯೋಗಿಸಲಾಗುವುದು. ಇಲ್ಲಿ ಎಲ್ಲಾ ವರ್ಗದ ಜನರು ಪೂಜೆ ಮಾಡುತ್ತಾರೆ. ಬಹುಶಃ ಇದು ರಾಮಾನುಜಾರ ಪ್ರಭಾವವಿರಬೇಕು.

ಈ ದೇವಸ್ಥಾನದಲ್ಲಿ ನೆರವೇರುವ ರಾಮೋತ್ಸವ, ಕೊಠಾರೋತ್ಸವ, ಪುಷ್ಪ ಬೃಂದಾವನೋತ್ಸವ ಇತರ ಆಕರ್ಷಣೀಯ ವಿಶೇಷೋತ್ಸವಗಳಲ್ಲಿ ಶ್ರೀ ಪಟ್ಟಾಭಿರಾಮನ ಅಲಂಕಾರ ವೈಭವವನ್ನು ನೋಡಲು ಕಣ್ಣುಗಳೆರಡು ಸಾಲುವುದಿಲ್ಲ.

**ಪ್ರಸನ್ನ ಶ್ರೀ ಸುಬ್ರಹ್ಮಣ್ಯ ಸ್ವಾಮಿ ದೇವಾಲಯ:-**

ಈ ದೇವಾಲಯವನ್ನು ೧೧ನೇ ಶತಮಾನದಲ್ಲಿ ಘಾಟಿ ಸುಬ್ರಹ್ಮಣ್ಯದ ಸ್ವಾಮಿಗಳು ಕಟ್ಟಿಸಿದುದಾಗಿ ಹೇಳಲಾಗಿದ್ದರೂ ಅಲ್ಲಿನ ವಾಸ್ತುಶಿಲ್ಪದ ಲಕ್ಷಣಗಳು ವಿಜಯನಗರದ ಶೈಲಿಯನ್ನೇ ಹೋಲುತ್ತಿದ್ದು ಇದು ೧೭ನೇ ಶತಮಾನದ ಉತ್ತಾರಾರ್ಧದ ದೇವಾಲಯವೆಂದು ಊಹಿಸಬಹುದು ಆದರೆ ಇಲ್ಲಿನ ಸ್ಥಳೀಯರು ಹೇಳುವಂತೆ ಈ ದೇವಾಲಯದ ಸ್ಥಾಪನೆಯ ಬಗ್ಗೆ ಒಂದು ಕಥೆಯಿದೆ.

ಶ್ರೀ ಕುಕ್ಕೆ ಸುಬ್ರಹ್ಮಣ್ಯ ಶ್ರೀ ಸುಬ್ರಹ್ಮಣ್ಯ ಮಠದ ಗುರು ಪರಂಪರೆಯ ಹದಿನಾಲ್ಕನೆಯವರಾದ ಶ್ರೀ ಶ್ರೀ ವಿಬುದೇಶತೀರ್ಥ ಶ್ರೀ ಪಾದಂಗಳವರು ಒಂದಾನಂದು ದಿನ ಮಹಾ ಶ್ರೀ ಸಂಪುಟ ನರಸಿಂಹ ದೇವರಿಗೆ ಮಹಾಪೂಜೆ ಮಾಡಿದ ತರುವಾಯ ಶಿಷ್ಯರು ಮಂಗಳಾರತಿಯ ಬತ್ತಿಯನ್ನು ಎತ್ತಿಕೊಂಡು

ನಿತ್ಯದಂತೆ ಹೊರ ಆವರಣದಲ್ಲಿ ಹಾಕಿರಲು ಕಾಗೆಯೊಂದು ಆ ಬತ್ತಿಯನ್ನು ಎತ್ತಿಕೊಂಡು ಹೋಗುವಾಗ ಹುಲ್ಲು ಛಾವಣಿ ಹೊಂದಿರುವ ಮಠದ ದೇವಸ್ಥಾನದ ಮೇಲೆ ಆ ಮಂಗಳಾರತಿ ಬತ್ತಿ ಬೀಳಲಾಗಿ ಮಂದಿರ ಬೆಂಕಿಗೆ ಆಹುತಿಯಾಯಿತು. ಇದರಿಂದ

ಮನನೊಂದ ಶ್ರೀ ಪಾದಂಗಳವರು ತಮ್ಮ ತಪಸ್‌ಶಕ್ತಿಯಿಂದ ಶ್ರೀ ಸುಬ್ರಹ್ಮಣ್ಯ ಸ್ವಾಮಿಯ ಜಪಮಾಡುತ್ತ ದೇವಸ್ಥಾನವನ್ನು ಮತ್ತೆ ಯಥಾವತ್ತಾಗಿ ನಿರ್ಮಿಸಲು ಅವಶ್ಯಕವಾದಷ್ಟು ಬಂಗಾರವನ್ನು ತಯಾರಿಸಿ ಕೊಡುವುದರ ಮುಖೇನ ಆ ದೇವಸ್ಥಾನದ ನಿರ್ಮಾಣಕ್ಕೆ ಸಹಕಾರಿಯಾದರು. ಶ್ರೀ ಪಾದಂಗಳವರು ಚಿನ್ನ ತಯಾರಿಸಿದ ವಿಷಯ ತಿಳಿದ ಆ ಕ್ಷೇತ್ರದ ರಾಜ ಇದೊಂದು ರಾಜದ್ರೋಹದ ಕೆಲಸವೆಂದು ಪರಿಗಣಿಸಿ ಶ್ರೀ ಪಾದಂಗಳವರನ್ನು ಬಂಧಿಸಿ ಏಕಕಾಲದಲ್ಲಿ ಮಠವನ್ನು ಆಕ್ರಮಿಸಿದಾಗ, ಪೂಜೆಯಲ್ಲಿ ತಲ್ಲೀನರಾಗಿದ್ದ ಶ್ರೀ ಪಾದಂಗಳವರು ವಿಷಯ ತಿಳಿದು ಪೂಜೆ ಪೂರೈಸಿ ತಮ್ಮ ಪ್ರಿಯ ಶಿಷ್ಯರಾದ ಶ್ರೀ ವೇದಗರ್ಭ ತೀರ್ಥಶ್ರೀಪಾದರಿಗೆ ಅಲ್ಲಿನ ಪೂಜೆಯನ್ನು ನಿರಂತರವಾಗಿ ನಡೆಸುವಂತೆ ಅಪ್ಪಣೆಯನ್ನು ಕೊಟ್ಟು ಎಲ್ಲರೂ ನೋಡ ನೋಡುತ್ತಿದ್ದಂತೆಯೇ ಅಗೋಚರವಾದರು. ಅನಂತರದಲ್ಲಿ ಶ್ರೀಗಳು ಯಾತ್ರಾರ್ಥವಾಗಿ ಹೊರಟು ಕೊಡಗಿನ ಸೂರಲಭಿ ಮೊದಲಾದ ಕಡೆಗಳಲ್ಲಿ ಸಾಗುತ್ತಾ ಶ್ರೀ ಕ್ಷೇತ್ರ ರಾಮನಾಥಪುರಕ್ಕೆ ದೂರದಲ್ಲಿರುವ ಸೂರಲಬಿಗೆ ಆಗಮಿಸಿದರು. ಈ ಸ್ಥಳಕ್ಕೆ ಕೊಡಗಿನ ಸೋಮವಾರಪೇಟೆಯಿಂದ ೧೨ ಮೈಲಿ ದೂರದಲ್ಲಿರುವ ಸೂರಲಭಿ ಕ್ಷೇತ್ರದಲ್ಲಿ ಶ್ರೀ ಸುಬ್ರಹ್ಮಣ್ಯ ದೇವಸ್ಥಾನವಿದೆ. ಅನಂತರದಲ್ಲಿ ಶ್ರೀಗಳು ಪರಮಪಾವನ ಸುಕ್ಷೇತ್ರ ರಾಮನಾಥಪುರದ ಕಾವೇರಿನದಿಯ ಉತ್ತರ ದಂಡೆಯ ಮೇಲಿರುವ ರಾಮೇಶ್ವರ ಮತ್ತು ಅಗಸ್ತ್ಯೇಶ್ವರ ಸಂಕ್ರಾತಿ ಮಂಟಪದಲ್ಲಿ ಶ್ರೀ ಪಾದಂಗಳವರು ಬಿಡಾರ ಹೂಡಿ ಶ್ರೀ ನರಸಿಂಹ ದೇವರ ಪೂಜಾ ಕೈಂಕರ್ಯಗಳನ್ನು ನಿರ್ವಿಘ್ನವಾಗಿ ನೆರವೇರಿಸಿದರು.

ಮುಂದಕ್ಕೆ ಸಂಚಾರಮಾಡಲು ಅಪೇಕ್ಷಿಸಿದ ಶ್ರೀ ಪಾದಂಗಳವರಿಗೆ ಅಂದು ಸ್ವಪ್ನದಲ್ಲಿ ಶ್ರೀ ಸುಬ್ರಹ್ಮಣ್ಯ ಸ್ವಾಮಿಯು ಪ್ರತ್ಯಕ್ಷವಾಗಿ ಇಲ್ಲಿಯವರೆವಿಗೂ ನಾನು ನಿನ್ನನ್ನು ಹಿಂಬಾಲಿಸಿ ಬಂದಿರುವೆನು. ಆದರೆ ಪಾಪನಾಶಿನಿಯಾದ ಈ ಕ್ಷೇತ್ರದಲ್ಲಿ ನಾನು ನೆಲೆಯಾಗಲು ಅಪೇಕ್ಷೀಸುತ್ತೇನೆ. ನನ್ನನ್ನು ಈ ಸ್ಥಳದಲ್ಲಿ ಪ್ರತಿಷ್ಠಾಪಿಸು ಎಂದು ಹೇಳಿ ಅಂತರ್ಧಾನನಾದನು.

ಕಾಕತಾಳಿಯ ಎಂಬಂತೆ ಅದೇ ರಾತ್ರಿ ಹೊಳೆನರಸೀಪುರದ ರಾಜನಾದ ದೇವಭಕ್ತ

ನರಸಪ್ಪನಾಯಕನಾಗಿ ಶ್ರೀ ಸುಬ್ರಹ್ಮಣ್ಯ ಸ್ವಾಮಿಯ ಕನಸಿನಲ್ಲಿ ಬಂದು ರಾಮನಾಥಪುರದ ಕ್ಷೇತ್ರಕ್ಕೆ ನನ್ನ ಇಚ್ಛಾನುಸಾರವಾಗಿ ಆಗಮಿಸಿರುವ ಮಹಾಯತಿಗಳ ಇಷ್ಟಾನುಸಾರವಾಗಿ ನಡೆದುಕೊಂಡಲ್ಲಿ ನಿನಗೆ ಪುತ್ರಪ್ರಾಪ್ತಿಯಾಗುವುದು ಎಂದು ಆದೇಶವಿತ್ತ.

ಇತ್ತ ಮರುದಿನ ಶ್ರೀ ಪಾದಂಗಳವರು ಮಿಂದು ಜಪಾನುಷ್ಠಾನಗಳನ್ನು ಪೂರೈಸಿ ದೇವರನ್ನು ಅರ್ಚಿಸಿರಲು ಈ ಕ್ಷೇತ್ರಕ್ಕೆ ಬಂದ ನರಸಪ್ಪನಾಯಕನು ಶ್ರೀ ಪಾದಂಗಳವರ ಪಾದಗಳಿಗೆ ದೀರ್ಘ ದಂಡಾಕಾರವಾಗಿ ನಮಸ್ಕಾರಗಳನ್ನು ಸಲ್ಲಿಸಿದ. ಆನಂತರ ತನ್ನ ಸ್ವಪ್ನ ವೃತ್ತಾಂತಗಳನ್ನು ಶ್ರೀ ಪಾದಂಗಳವರಲ್ಲಿ ಅರುಹಿ "ಬುದ್ದಿ ನಾನು ಬಹುಕಾಲದಿಂದ ಸಂತಾನಹೀನನಾಗಿರುವೆನು ತಮ್ಮಾಜ್ಞೆಯನ್ನು ಶಿರಸಾವಹಿಸಿ ಪಾಲಿಸಲು ಹಗಲಿರುಳು ಕಂಕಣಬದ್ದನಾಗಿರುತ್ತೇನೆ" ನಿಮ್ಮ ಈ ಕಿಂಕರ ಎಂದ. ಇದರಿಂದ ಹರ್ಷಗೊಂಡ ಶ್ರೀಗಳು ಶ್ರೀ ಸುಬ್ರಹ್ಮಣ್ಯ ಸ್ವಾಮಿಯನ್ನು ಪ್ರತಿಷ್ಠಾಪಿಸಬೇಕಿದೆ. ಆದುದರಿಂದ ದೇವಸ್ಥಾನವೊಂದನ್ನು ನಿರ್ಮಿಸಿ ದೇವರ ಸೇವೆ ಅಹರ್ನಿಶಿ ನಡೆಯುವಂತೆ ವ್ಯವಸ್ಥೆ ಮಾಡಬೇಕು ಎಂದು ಅಪ್ಪಣೆ ಕೊಡಿಸಿದಾಗ ನರಸಪ್ಪ ನಾಯಕನು ಶೀಘ್ರವಾಗಿ ದೇವಸ್ಥಾನ ನಿರ್ಮಾಣ ಮಾಡಿಸಿದ ಶ್ರೀ ಪಾದಂ ಗಳವರು ನರಸಪ್ಪ ನಾಯಕನಾಗಿ ಶೀಘ್ರ ಪುತ್ರ ಪ್ರಾಪ್ತಿಯಾಗಲೆಂದು ಅನುಗ್ರಹಿಸಿದರು.

ಶ್ರೀ ಸುಬ್ರಮಣ್ಯ ಸ್ವಾಮಿ ಶ್ರೀ ವಿಬುದೇಶ ತೀರ್ಥ ಶ್ರೀಪಾದಂಗಳವರನ್ನು ಪ್ರೇಮದಿಂದ ಹಿಂಬಾಲಿಸಿ ಈ ಕ್ಷೇತ್ರದಲ್ಲಿ ಪ್ರಸನ್ನನ್ನಾಗಿ ಪ್ರತ್ಯಕ್ಷನಾದ್ದರಿಂದ ಸ್ವಾಮಿಗೆ ಪ್ರಸನ್ನ ಶ್ರೀಸುಬ್ರಹ್ಮಣ್ಯ ಸ್ವಾಮಿ ಎಂಬ ಹೆಸರು ಪ್ರಖ್ಯಾತವಾಯಿತು. ಶ್ರೀ ಪಾದಂಗಳವರು ಬಹುಕಾಲ ಈ ಕ್ಷೇತ್ರದಲ್ಲಿಯೇ ತಪೋನಿರತರಾಗಿ ಸ್ವರ್ಗಸ್ಥರಾದರು. ಇಂದಿಗೂ ಕಾವೇರಿಯ ಉತ್ತರ ತೀರದಲ್ಲಿ ಇವರ ವೃಂದಾವನವಿರುವುದನ್ನು ಕಾಣಬಹುದು.

ಈ ಕ್ಷೇತ್ರಾಧಿಪತಿ ಚತುರ್ಯುಗ ಮೂರ್ತಿ ಶ್ರೀರಾಮೇಶ್ವರನಾದರೂ, ಹೆಚ್ಚು ವಿಖ್ಯಾತಗೊಂಡ ದೇವರೆಂದರೆ ಪ್ರಸನ್ನ ಶ್ರೀ ಸುಬ್ರಹ್ಮಣ್ಯಸ್ವಾಮಿ. ಈ ದೇವರ ಜಾತ್ರೆಯೆಂದರೆ ಅದು ರಾಮನಾಥಪುರ ಜಾತ್ರೆಗೆ ಮತ್ತೊಂದು ಹೆಸರು. ಅಷ್ಟೊಂದು ಮಹತ್ವ ಈ ಕ್ಷೇತ್ರಕ್ಕೆ ಇದೆ. ಕುಕ್ಕೆ ಸುಬ್ರಹ್ಮಣ್ಯ ಕ್ಷೇತ್ರದಲ್ಲಿರುವಂತೆ ಈ ಕ್ಷೇತ್ರದಲ್ಲೂ ಪ್ರಸನ್ನ ಶ್ರೀ ಸುಬ್ರಹ್ಮಣ್ಯಸ್ವಾಮಿಯವರ ದೇವಸ್ಥಾನದ ಒಳ ಪ್ರಕಾರದಲ್ಲಿ ಶಕ್ತಿದೇವತೆಯಾದ ಹೊಸಳಿಗೆ ಅಮ್ಮ ನವರ ಗುಡಿಯಿದೆ.

ಈ ದೇವಸ್ಥಾನಕ್ಕೂ ಕುಕ್ಕೆ ಸುಬ್ರಹ್ಮಣ್ಯ ಕ್ಷೇತ್ರದಲ್ಲಿರುವ ದೇವಾಲಯಕ್ಕೂ ಸುರಂಗ ಮಾರ್ಗವಿದೆ ಎಂಬ ನಂಬಿಕೆಯಿದೆ. ಅಲ್ಲದೆ ಇಲ್ಲಿ ಹುತ್ತವಿದ್ದು ಅದರಲ್ಲಿ ಹಾವು ಇದೆ ಎಂಬ ನಂಬಿಕೆ ಇದೆ. ಹೆಚ್ಚು ಭಕ್ತಾದಿಗಳು ಇಲ್ಲಿಗೆ ಬರುವುದನ್ನು ನಾವು ಕಾಣಬಹುದು. ಪ್ರಸನ್ನ ಶ್ರೀ ಸುಬ್ರಹ್ಮಣ್ಯ ಸ್ವಾಮಿಯವರ ಪೂಜಾ ಕೈಂಕರ್ಯಗಳು ಸರ್ವದಾ ನಡೆಯಲೆಂದೆ ಕ್ರಿ.ಶ. ೧೬೬೦ ಜನವರಿ ೮ನೇ ಭಾನುವಾರದಂದು ಹೊಳೆನರಸಿಪುರದ ನರಸಪ್ಪನಾಯಕ ರಾಜನು ಈ ದೇವಸ್ಥಾನಕ್ಕೆ ಯಗಟೆ ಎಂಬ ಗ್ರಾಮವನ್ನ ಉಂಬಳಿಯಾಗಿ ಸಮರ್ಪಿಸಿರುವ ವಿಚಾರ ಭೂದಾನ ಧರ್ಮ ಶಾಸನದಲ್ಲಿದೆ.

**ಶ್ರೀ ಅಗಸ್ತ್ಯೇಶ್ವರ ಮತ್ತು ಕಾವೇರಿನದಿ:**

ಭೃಗು ಮಹರ್ಷಿಗಳಿಂದ ಗತಕಾಲದಲ್ಲಿ ಸರ್ವಭಕ್ಷಕನಾಗು ಎಂದು ಶಾಪಗ್ರಸ್ಥನಾದ ಅಗ್ನಿ ಅವಮಾನಿತನಾಗಿ ವಿಂಧ್ಯದ ದಕ್ಷಿಣಾಭಿಮುಖವಾಗಿ ಪ್ರಯಾಣ ಮಾಡಲಾರಂಭಿಸಿದ. ಅಗ್ನಿಯಿಂದಲೇ ಹವಿರ್ಭಾಗಗಳನ್ನು ಸ್ವೀಕರಿಸುತ್ತಿದ್ದ ದೇವತೆಗಳು ಸಹಜವಾಗಿಯೆ ಅಗ್ನಿಯ ಕಣ್ಮರೆಯಿಂದ ಚಿಂತಾಕ್ರಾಂತರಾದರು. ಇತ್ತ ಅಗ್ನಿ ದಂಡಕಾರಣ್ಯದಲ್ಲಿದ್ದ ರುದ್ರರಮಣೀಯವಾದ ಪುಷ್ಕರ ಸರೋವರವೊಂದನ್ನು ಸೇರಿ ಅದರ ದಡದಲ್ಲಿಯೆ ತಾನಾಗಿಯೇ ಉದ್ಭವಿಸಿರುವ ಪರಮ ಕಾರುಣಿಕ ಶಿವಲಿಂಗವನ್ನು ಎಂದರೆ ಇಂದಿನ ರಾಮೇಶ್ವರವನ್ನು ಅರ್ಜಿಸುತ್ತಾ ಘೋರ ತಪಗೈದ.

ಅಗ್ನಿಯ ತಪೋಮಹಿಮೆಯಿಂದ ಉಂಟಾದ ಜ್ವಾಲೆ ಸಮಸ್ತ ಲೋಕವನ್ನೆ ಸುಡಲಾರಂಭಿಸಿದಾಗ ಭಯಗೊಂಡ ಇಂದ್ರದೇವತೆಗಳು ಕೈಲಾಸವಾಸ ಪರಮೇಶ್ವರನ ಸನ್ನಿಧಾನಕ್ಕೆ ಬಂದು ಅಗ್ನಿಗೆ ಅಭೀಷ್ಟ ಫಲವನ್ನು ಅನುಗ್ರಹಿಸಿ ತಮಗೆ ಹವಿರ್ಭಾಗಗಳು ಅಹರ್ನಿಷಿ ಲಭಿಸುವಂತೆ ಹರಸಬೇಕೆಂದು ಭಿನ್ನವಿಸಲು ಅಗ್ನಿಯು ಆರಾಧಿಸುತ್ತಿದ್ದ ಲಿಂಗದಲ್ಲಿಯೇ ಪ್ರತ್ಯಕ್ಷನಾದ ವಹ್ನಿನೇತ್ರ ಈಶ್ವರ. ಅವನನ್ನು ಅಗ್ನಿ ವಹ್ನಿಸೂತ್ರದಿಂದ ಸ್ತೋತ್ರಮಾಡಿ ಸಾಷ್ಟಾಂಗವೆರಗಿದ. ಪರಮ ಸಂತೋಷಗೊಂಡ ಪರಶಿವ ಅಗ್ನಿಯ ದೋಷ ಕ್ಲೇಷಗಳನ್ನು ನಾಶಮಾಡಿ ಆಶೀರ್ವದಿಸಿ ಆ ಲಿಂಗದಲ್ಲಿಯೇ ಅದೃಶ್ಯನಾದ. ಅನಂತರ ಅಗ್ನಿ ಪಾಪವಿನಾಶಿಯಾದ ಪುಷ್ಕರಣಿದಲ್ಲಿ ಸ್ನಾನಾದಿಗಳನ್ನು ಪೂರೈಸಿಕೊಂಡು ವಿಧವಿಧವಾದ ಕುಸುಮಗಳಿಂದ ಬಗೆ ಬಗೆಯಾಗಿ ಈಶ್ವರನನ್ನು ಆರಾಧಿಸುತ್ತಾ ಯಜ್ಞಯಾಗಾದಿಗಳನ್ನು ನಿರಂತರ ಮಾಡುತ್ತಲಿದ್ದ. ಅಗ್ನಿಯಕಾರ್ಯದಿಂದ ಸುಪ್ರೀತನಾದ

ಕೈಲಾಸವಾಸಿ ಪಾರ್ವತಿ ಸಮೇತನಾಗಿ ತನ್ನ ಪರಿವಾರದೊಡನೆ ಲಿಂಗಮಧ್ಯದಿಂದ ದರ್ಶನಭಾಗ್ಯವನ್ನಿತ್ತಾಗ ಅಗ್ನಿ ಕರುಣಾಸಾಗರನಾದ ಸ್ವಾಮಿಯೇ ಈ ಲಿಂಗದಲ್ಲಿ ನನ್ನಿಂದ ಆರಾಧಿಸಲ್ಪಟ್ಟ ನೀನು ಅನುಗಾಲವೂ ಇಲ್ಲಿಯೇ ನೆಲೆಸಿ ಭಕ್ತಜನರಿಗೆ ವಾಂಛಿತಾರ್ಥಗಳನ್ನು ಕೊಟ್ಟು ಉಧ್ಧರಿಸಬೇಕು ಎಂದು ಪ್ರಾರ್ಥಿಸಲು ತಥಾಸ್ತು ಎಂದ ವಹ್ನೀಶ್ವರ ಅಗ್ನಿಯನ್ನು ಕುರಿತು ನೀನು ತ್ರಿಕಾಲವೂ ಈ ಪುಷ್ಕರಣಿಯಲ್ಲಿ ಸ್ನಾನ ಮಾಡಿ ನನ್ನನ್ನು ಆರಾಧಿಸಿದ ಈ ಸ್ಥಳ ನನಗೂ ಪ್ರಿಯವೇ. ಸಮಸ್ತ ಪಾಪಗಳನ್ನು ಕಳೆವ ಈ ಪುಷ್ಕರಣಿ ಇನ್ನು ಮುಂದೆ 'ವಹ್ನಿಪುಷ್ಕರಣಿ' ಎಂದು ಪ್ರಸಿದ್ಧವಾಗಲಿ ಮುಂದೆ ಅಗಸ್ತ್ಯ ಮಹರ್ಷಿಗಳ ಸತಿಯಾದ ಕಾವೇರಿ ನದಿ ರೂಪವಾಗಿ ಹರಿಯುವಳು ದಕ್ಷಿಣಕ್ಕೆ ಕಾವೇರಿಯು ಉತ್ತರಕ್ಕೆ ಗಂಗೆಯು ಶ್ರೇಷ್ಠಳು. ವಹ್ನಿ ಪುಷ್ಕರಣಿ ಸಮೇತಳಾಗಿ ಕಾವೇರಿ ದಕ್ಷಿಣೋತ್ತರಗಳಲ್ಲಿರುವ ಸರ್ವನದಿಗಳಿಗೂ ಶ್ರೇಷ್ಠಳು ಎಂಬುದಾಗಿ ವರವನ್ನಿತ್ತು ಅಂತರ್ಧಾನನಾದ.

ಲೋಕದಲ್ಲಿ ವಹ್ನಿಪುಷ್ಕರಿಣಿ, ಅರ್ಕ ಪುಷ್ಕರಣಿ, ಚಂದ್ರಪುಷ್ಕರಣಿ ಎಂಬ ೩ ಪುಷ್ಕರಣಿಗಳಿರುವವು, ಮೂರು ಪುಷ್ಕರಣಿಗಳೂ ಕಾವೇರಿಯಲ್ಲಿಯೇ ಇರುತ್ತವೆ. ಪುರಾಣಗಳಲ್ಲಿ ವಾಸವಾಪುರಿ ಎಂದೇ ಪ್ರಖ್ಯಾತವಾದ ಇಂದಿನ ರಾಮನಾಥಪುರದಲ್ಲಿ ವಹ್ನಿಪುಷ್ಕರಣಿ ಇದೆ. ಹಿಂದಿನ ಎಡತೊರೆ ಇಂದಿನ ಕೃಷ್ಣರಾಜಸಾಗರದ ಬಳಿ ಅರ್ಕಪುಷ್ಕರಣಿ, ತಮಿಳುನಾಡಿನ ಶ್ರೀ ರಂಗಂ ನಲ್ಲಿ ಚಂದ್ರಪುಷ್ಕರಣಿ ಇದೆ.

ಇದೇ ವಹ್ನಿಪುಷ್ಕರಿಣಿಯಲ್ಲಿ ಪಂಚಮಾರ್ಗಗಳ ವೈವಿಧ್ಯಮಯವಾದ ಹಾಗೂ ನಾನಾ ಜಾತಿಯ ಬೃಹತ್ ಮೀನುಗಳೂ ಇವೆ. ಈ ಮತ್ಸ್ಯಗಳೆಲ್ಲವೂ ಶಿವನ ಸಾನಿಧ್ಯದಲ್ಲಿರುವ ದೇವತೆಗಳ ಅವತಾರವೆಂಬ ನಂಬಿಕೆಯಿದೆ. ಎಂತಹ ಭಯಂಕಾರ ಪ್ರವಾಹ ಬಂದರೂ ಮತ್ಸ್ಯಗಳು ಮಾತ್ರ ಅಗಲಲಾರವು. ಇದು ನಂಬಿಕೆಗೆ ಬಲವಾದ ಬೇರಿನಂತಿವೆ.

ಹಿಂದೆ ಮೈಸೂರಿನ ಅರಸರಾದ ಶ್ರೀ ಮುಮ್ಮಡಿಕೃಷ್ಣರಾಜಒಡೆಯರ್ ಈ ಕ್ಷೇತ್ರಕ್ಕೆ ಅಗಮಿಸಿದಾಗ ಒಂದೆರೆಡು ಮೀನಿಗೆ ಮುತ್ತಿನ ಮೂಗುತಿಯನ್ನು ಅಲಂಕರಿಸಿದರೆಂದು ಹೇಳುತ್ತಾರೆ. ಪೂರ್ವದಲ್ಲಿ ಶ್ರೀ ಮನ್ನಾರಾಯಣ ಸಮಸ್ತ ಪವಿತ್ರ ತೀರ್ಥಗಳನ್ನು ಆಹ್ವಾನಿಸಿ ಪ್ರಳಯಕಾಲದಲ್ಲಿ

ಸ್ವಸ್ಥಾನಗಳಿಗೆ ಮರುಳುವಿರೆಂದು ತಿಳಿಸಿ ಒಂದು ಕಮಂಡುಲುವಿನಲ್ಲಿ ಇರಿಸಿದ. ಆ ಕಮಂಡಲುವನ್ನು ಅಗಸ್ತ್ಯಮಹರ್ಷಿಗಳ ಕೈಗಿಟ್ಟು ಅಂತರ್ಧಾನನಾದನು.

ಶ್ರೀ ಮನ್ನಾರಾಯಣನಿಂದ ಕಮಂಡಲವನ್ನು ಸ್ವೀಕರಿಸಿದ ಅಗಸ್ತ್ಯ ಮಹರ್ಷಿಗಳು ಕೊಡಗಿನ ಬ್ರಹ್ಮಗಿರಿಯಲ್ಲಿ ತಪಸ್ಸು ಮಾಡುತ್ತಿದ್ದಾಗ ಕವೇರನ ಪುತ್ರಿಯಾದ ಅತಿರೂಪ ಲಾವಣ್ಯವತಿಯಾದ ಲೋಪಾಮುದ್ರೆಯನ್ನು ಅರ್ಥಾತ್ ಕಾವೇರಿಯನ್ನು ಕಂಡು ವರಿಸಲು ಬಯಸಿದನು. ಆದರೆ ಕಾವೇರಿ ಅಗಸ್ತ್ಯ ಮಹರ್ಷಿಗಳಿಗೆ ಒಂದು ನಿಬಂಧನೆ ಒಡ್ಡಿದಳು. ಅದೇನೆಂದರೆ ಮೂರು ಮುಕ್ಕಾಲು ಘಳಿಗೆ ತನ್ನನ್ನು ಬಿಟ್ಟು ಅಗಲಿರಬಾರದೆಂದು ಈ ಒಪ್ಪಂದವನ್ನು ಮನ್ನಿಸಿದ ಅಗಸ್ತ್ಯ ಕಾವೇರಿಯನ್ನು ತನ್ನ ಸಂಗಾತಿಯನ್ನಾಗಿ ಮಾಡಿಕೊಂಡ.

ಒಂದಾನೊಂದು ದಿನ ಮುನಿ ಅಗಸ್ತ್ಯ ದಿವ್ಯತೀರ್ಥದ ತೀರದಲ್ಲಿ ಮಿಂದು ಅಹ್ನಿಕದಲ್ಲಿ ನಿರತರಾಗಿರಲು ಮೂರು ಮುಕ್ಕಾಲು ಘಳಿಗೆ ಸರಿದಿದ್ದೆ ತಿಳಿಯಲಿಲ್ಲ. ಕಾವೇರಿಯಾಗಲೆ ಕೋಪಗೊಂಡಿದ್ದಳು ಕಮಂಡಲವಿನಿಂದ ಉಕ್ಕಿದ ಕಾವೇರಿ ಅಗಸ್ತ್ಯರ ಅಪ್ಪಣೆ ಪಡೆದು ನದಿರೂಪವಾಗಿ ತಲಕಾವೇರಿಯಿಂದ ಭಾಗಮಂಡಲ ಮಾರ್ಗವಾಗಿ ವಾಸವಾಪುರಿ ರಾಮನಾಥಪುರಕ್ಕೆ ಆಗಮಿಸಿ ವಹ್ನಿಪುಷ್ಕರಿಣಿಯ ಮೇಲೆ ಪ್ರವಹಿಸಿದಳು. ಸತಿಯ ಮೇಲಿನ ವ್ಯಾಮೋಹದಿಂದ ಅಗಸ್ತ್ಯ ಕಾವೇರಿಯನ್ನು ಅನುಸರಿಸುತ್ತಾ ೧೨ ಯೋಜನಗಳಿಗೊಂದರಂತೆ ಶಿವಲಿಂಗವನ್ನು ಪ್ರತಿಷ್ಠಾಪಿಸಿದ. ಹೀಗೆ ರಾಮನಾಥಪುರದಲ್ಲಿ ಸ್ಥಾಪಿಸಿದ ಶಿವಲಿಂಗಕ್ಕೆ ಅಗಸ್ತ್ಯೇಶ್ವರ ಎಂಬ ಹೆಸರು ಉಂಟಾಯಿತು.

ಉತ್ತಮವಾದ ಪುಷ್ಕರಿಣಿತ್ರಯದಲ್ಲಿ ಒಂದಾದ ವಹ್ನಿಪುಷ್ಕರಿಣಿಯುಕ್ತಳಾದ ರಾಮೇಶ್ವರಾಗಸ್ತ್ಯೇಶ್ವರರ ನಡುವೆ ೩ ಪದ್ಮ ೧೪ ಕೋಟಿ ೬೦ ಸಾವಿರ ಪವಿತ್ರ ತೀರ್ಥಗಳಿಂದ ಯುಕ್ತಳೂ ಆದ ಮಹಾಪಾಪಗಳನ್ನೂ ಭಸ್ಮಮಾಡಿ ಸಕಲ ಸೌಭಾಗ್ಯಗಳನ್ನು ಕರುಣಿಸುತ್ತಾ ಸರ್ವೋತ್ಕೃಷ್ಟಳಾಗಿರುವ ಕಾವೇರಿಯನ್ನು ಹತ್ಯಾದೋಷ ನಿವಾರಣೆಗೋಸ್ಕರ ಹೊಂದು ಎಂದು ಕೃಷ್ಣಪರಮಾತ್ಮ ಪಾಂಡವರಿಗೆ ಭೋದಿಸಿರುವುದು ಭವಿಷ್ಯೋತ್ತರ ಪುರಾಣದಲ್ಲಿ ವ್ಯಕ್ತವಾಗಿದೆ.

ಶ್ರೀ ಅಗಸ್ತ್ಯೇಶ್ವರ ದೇವಸ್ಥಾನದ ಒಳಗೆ ಮಹಾಗಣಪತಿ ಪರಶುರಾಮ, ಚಾಮುಂಡೇಶ್ವರಿ, ಲಕ್ಷ್ಮೀದೇವಿ ಮತ್ತು ಸಪ್ತಮಾತೃಕೆಯರ ವಿಗ್ರಹಗಳಲ್ಲದೆ ಪ್ರಾಕಾರದಲ್ಲಿ ವೀರಭದ್ರ, ಸೂರ್ಯನಾರಾಯಣ, ದಕ್ಷಿಣಾಮೂರ್ತಿ, ಚಂಡಿಕೇಶ್ವರ, ವೇಣುಗೋಪಾಲ, ಬ್ರಹ್ಮ ಮತ್ತು ಕಾಲಭೈರವ

ವಿಗ್ರಹಗಳಿವೆ. ಅಗಸ್ತ್ಯೇಶ್ವರ ದೇವಸ್ಥಾನದಿಂದ ಗಾಯಿತ್ರಿ ಶಿಲೆಗೆ ಹೋಗುವ ಹಾದಿಯಲ್ಲಿ ಮಹಾಪಾಪಗಳನ್ನು ಪರಿಹರಿಸಲು ಕುಮಾರಧಾರ ತೀರ್ಥವಿದೆ.

**ಕಾವೇರಿ ನದಿಯಲ್ಲಿರುವ ಇತರ ಶಿಲೆಗಳು**

ಕಾವೇರಿ ನದಿಯಲ್ಲಿ ಒದ್ದೊಂದು ಶಿಲೆಯು ಪುರಾಣವನ್ನು ಸಾರಿ ಹೇಳುತ್ತದೆ. ಅಂತಹ ಶಿಲೆಗಳಲ್ಲಿ ಗಾಯತ್ರಿ ಶಿಲೆ, ಊರ್ವಶಿ ಶಿಲೆ, ಮೇನಕ ಶಿಲೆ, ಗೌತಮ ಶಿಲೆ, ಗೋಗರ್ಭ, ಹನುಮಂತಗೋವು ಹೀಗೆ ಪ್ರತಿಯೊಂದು ಶಿಲೆಯ ಹಿಂದೆಯೂ ಅನೇಕ ಪುರಾಣಗಳು ಹೆಣೆದುಕೊಂಡಿವೆ.

**ಗಾಯತ್ರೀ ಶಿಲೆ.**

ಅಮರಾವತಿಯಂತೆ ಶೋಭಾಯಮಾನವಾದ ಹೈಮವಂತ ಎಂಬ ರಾಜ್ಯವನ್ನಾಳುತ್ತಿದ್ದ ಸುಬಾವು ಎಂಬ ರಾಜನಿಗೆ ಹೇಮ ಮತ್ತು ಕಪಿಲಾ ಎಂಬ ಪುತ್ರಿಯರಿದ್ದರು. ಇವರು ಮಹಾಪತಿವ್ರತೆಯರು. ಬಹುಕಾಲ ಉರುಳಿದರೂ ಸಂತಾನವಾಗದ ಕಾರಣ ಚಿಂತಾಕ್ರಾಂತರಾದರು. ಒಂದಾನೊಂದು ದಿನ ರಾಜ ಶ್ರೀ ಕ್ಷೇತ್ರ ವಾಸವಾಪುರಿಗೆ ಬಂದು ವಹ್ನಿಪುಷ್ಕರಿಣಿಯಲ್ಲಿ ಸ್ನಾನ ಜಪ-ತಪಾದಿಗಳನ್ನು ಪೊರೈಸಿ ದೇವರ ದರ್ಶನ ಮಾಡಿ ವಿಪ್ರೋತ್ತಮರಿಗೆ ದಾನಧರ್ಮಗಳನ್ನು ಮಾಡಿ ಋಷಿಶ್ರೇಷ್ಠರಾದ ವಾಮದೇವ ಮಹರ್ಷಿಗಳ ಚರಣ ಕಮಲಗಳಿಗೆ ತ್ರಿಕಾಲಜ್ಞರಾದ ಮುನಿಶ್ರೇಷ್ಠರೇ ನನಗೆ ರಾಜ್ಯಕೋಶ ಭೃತ್ಯರುಗಳಿದ್ದರೂ ತ್ರಿಲೋಕದಲ್ಲಿನ ಸರ್ವವಸ್ತುಗಳನ್ನು ಪಡೆಯುವ ಸಾಮರ್ಥವಿದ್ದರೂ ನಾನು ವಂಶಾಭಿವೃದ್ಧಕ ಪುತ್ರನಿಲ್ಲದೆ ಪುತ್ರ ಹೀನನಾಗಿರುವೆ. ರೆಕ್ಕೆಯಿಲ್ಲದ ಹಕ್ಕಿಯಂತೆ ಅಗ್ನಿಯಿಲ್ಲದ ಯಜ್ಞದಂತೆ ನನ್ನ ಬದುಕಾಗಿದೆ. ಈ ಸಂತಾನ ಹೀನನಿಗೆ ಪುತ್ರೋತ್ಪತ್ತಿಯಾಗುವಂತೆ ಕೃಪೆಮಾಡಿ ಹರಸಿ ಎಂದು ಭಿನ್ನವಿಸಿಕೊಂಡ. ಆಗ ವಾಮದೇವ ಮಹರ್ಷಿಗಳು ತಮ್ಮ ಜ್ಞಾನದೃಷ್ಠಿಯಿಂದ ಎಲೈ ರಾಜನೇ ಹಿಂದಿನ ಜನ್ಮದಲ್ಲಿ ನಿನ್ನ ಪತ್ನಿಯರು ದೇವಲೋಕದಲ್ಲಿ ಯೋಗಿನಿಯರಾಗಿದ್ದರು. ಕಾಲ ಕಾಲಕ್ಕೆ ಸರಿಯಾಗಿ ಸೇವೆಗೈಯಲು ಬರಲಿಲ್ಲವೆಂದು ಕುಪಿತಗೊಂಡು ಇಂದ್ರನು ಭೂಲೋಕದಲ್ಲಿ ಮನುಷ್ಯರಾಗಿ ಜನಿಸಿದರೆಂದೂ ಸಂತಾನ

ಹೀನರಾಗಿರೆಂದು ಶಾಪವಿತ್ತ. ಆದುದರಿಂದ ಅವರಲ್ಲಿ ನಿನಗೆ ಸಂತಾನ ಕನಸೇ ಸರಿ. ಆದರೆ ಆ ನಿನ್ನ ಪತ್ನಿಯರು ಅರ್ಥಾತ್ ಯೋಗಿನಿಯರು ಇಂದ್ರನಲ್ಲಿ ತಮ್ಮ ತಪ್ಪನ್ನ ಒಪ್ಪಿಕೊಂಡು ಮನ್ನಿಸ ಬೇಕೆಂದು ಭಿನ್ನವಿಸಿಕೊಂಡಿದ್ದರಿಂದ ಅವರಿಗೆ ಶ್ರೇಷ್ಠವಾದ ಸ್ಥಾನ ಸಿಗಲಿದೆ. ನೀನಾದರೋ ಪೂರ್ವಜನ್ಮದಲ್ಲಿ ಶೂದ್ರನಾಗಿದ್ದೆ. ವಹ್ನಿಪುಷ್ಕರಣಿಯಲ್ಲಿ ಸ್ನಾನಾದಿಗಳನ್ನು ಮಾಡಿದ ಕಾರಣ ಈ ಜನ್ಮದಲ್ಲಿ ರಾಜನಾಗಿದ್ದೀಯೆ ಪುತ್ರರನ್ನು ಹೊಂದುವುದಕ್ಕೆ ಯಾವ ಪುಣ್ಯವನ್ನು ಕಳೆದ ಜನ್ಮದಲ್ಲಿ ಮಾಡದ ಕಾರಣ ನಿನಗೆ ಸಂತಾನ ಫಲವಿಲ್ಲ ಎಂದರು.

ಅನಂತರ ಹೆಂಡತಿಯರಿಬ್ಬರು ಹೇಳಿದರು ರಾಜನೇ ಮಕ್ಕಳಿಲ್ಲವೆಂದು ಏಕೆ ದು;ಖಿಸುತ್ತಿ, ನೀನು ಮಾಡಿದ ಸುಕೃತ ದುಷ್ಕೃತ್ಯಗಳನ್ನು ನೀನೇ ಅನುಭವಿಸಬೇಕು. ಆದ್ದರಿಂದ ಸರ್ವವನ್ನೂ ವರ್ಜಿಸಿ ಹೃದಯ ಪದ್ಮದಲಿ ಸರ್ವಾಂತರ್ಯಾಮಿಯು ಮಹಾಬಂಧ ವಿಮೋಚನನೂ ಕ್ಷೀರಾಬ್ಧಿಶಾಯಿಯೂ ಆದ ಶ್ರೀಮನ್ನಾರಾಯಣನನ್ನು ಆರಾಧಿಸು ಮೋಕ್ಷಮಾರ್ಗವನ್ನಾಶ್ರಯಿಸುತ್ತದೆ ಎಂದರು.

ಆ ಬಳಿಕ ರಾಜ ಸುಬಾವು ಹೃದಯ ಶುದ್ಧಿಯಿಂದ ಹೃದಯ ಕಮಲದಲ್ಲಿ ಸರ್ಪಶಯನ ಶ್ರೀಮನ್ನಾರಯಣನನ್ನು ಆರಾಧಿಸುತ್ತಾ ಧ್ಯಾನಮಾರ್ಗವನಾಶ್ರಯಿಸಿದ. ಇತ್ತ ಹಿರಿಯವಳಾದ ಹೇಮಾ ಹೇಮಾವತಿ ಎಂಬ ನಾಮಾಂಕಿತದಿಂದ ಲೋಕೋಪಕಾರಕ್ಕಾಗಿ ನದೀರೂಪವಾಗಿ ಹೊರಟು ಪವಿತ್ರಳಾದ ಕಾವೇರಿಯ ಸನ್ನಿಧಿಗೆ ಕೃಷ್ಣರಾಜನಗರ ತಾಲ್ಲೂಕು ತಿಪ್ಪೂರು ಸಮೀಪ ಸೇರಿ ಧನ್ಯಳಾದರೆ, ಕಿರಿಯವಳಾದ ಕಪಿಲೆ ಶ್ರೀಕ್ಷೇತ್ರ ರಾಮನಾಥಪುರದಲ್ಲಿನ ಕಾವೇರಿ ನದಿಯ ನಡುವಿನಲ್ಲಿ ಕಪಿಲಾಶಿಲೆ, ಗಾಯಿತ್ರಿಶಿಲೆ ಯಾಗಿ ತಪಸ್ವಿಗಳಿಗೆ ಅತಿ ಶೀಘ್ರ ಫಲದಾಯಕಳಾದಳು.

ಅದರಲ್ಲೂ ಕಪಿಲಾಶಿಲೆಯನ್ನು ಪ್ರಾರ್ಥಿಸಿಕೊಂಡು ವೇದಮಾತೃವಾದ ದೇವಿ ಶ್ರೀಗಾಯಿತ್ರಿಯನ್ನು ಜಪಿಸಿದರೆ ಸಮಸ್ತ ನೋವುಗಳಿಂದ ಮುಕ್ತವಾಗಿ ಮೋಕ್ಷವನ್ನು ಹೊಂದುತ್ತಾರೆ ಎಂಬುದು ಪುರಾಣಗಳಲ್ಲಿ ವೇದ್ಯವಾಗಿದೆ. ಅಲ್ಲದೆ ಶ್ರೀಗಾಯತ್ರೀ ಶಿಲೆಯಲ್ಲಿ ಒಂದು ಗಾಯತ್ರೀ ಜಪವನ್ನು ಮಾಡಿದರೆ ೧೨ಸಾವಿರ ಗಾಯತ್ರೀಜಪದ ಫಲ ದೊರಕುವುದೆಂದು ಶಾಸನದಲ್ಲಿ ಉಲ್ಲೇಖವಿದೆ. ಪೂರ್ವದಲ್ಲಿ ಛಲವಾದಿ ಕೌಶಿಕನೆಂಬ ರಾಜನು ವಿಶ್ವಾಮಿತ್ರನಾಗಿ ರಾಜರ್ಷಿತ್ವವನ್ನು

ಪಡೆದಿದ್ದರೂ ತೃಪ್ತನಾಗದೆ ಬ್ರಹ್ಮರ್ಷಿಯಾಗಲೇಬೇಕೆಂದು ಆಪೇಕ್ಷಿಸಿದಾಗ ಈ ಗಾಯತ್ರಿ ಶಿಲೆಯ ಮೇಲೆ ಕುಳಿತು ಅಖಂಡ ಸಹಸ್ರಾರು ಸಂವತ್ಸರಗಳ ಕಾಲ ತಪಸ್ಸನ್ನಾಚರಿಸಲು ಸಂತೃಪ್ತಳಾದ ಶ್ರೀ ಗಾಯತ್ರೀ ದೇವಿ ಸುಪ್ರಸನ್ನಳಾಗಿ ಬ್ರಹ್ಮರ್ಷಿತ್ವ ವನ್ನು ಅನುಗ್ರಹಿಸಿದಳು. ಈ ಶಿಲೆಯಲ್ಲಿ ಗಾಯತ್ರಿ ಮುಂತಾದ ಜಪತಪಾದಿಗಳನ್ನು ಮಾಡುವ ಭಕ್ತರಿಗೆ ವಜ್ರಪಂಜರದಂತಿದ್ದು ಉದ್ಧರಿಸುತ್ತಾಳೆ.

ಹಿಂದೆ ಶ್ರೀರಾಮ ಲಕ್ಷ್ಮಣ ಗುರುಗಳಾದ ವಸಿಷ್ಠರು ಅಗಸ್ತ್ಯರು ವಿಭೀಷಣಾದಿಯಾಗಿ ಎಲ್ಲರೂ ಗಾಯತ್ರಿ ಶಿಲೆಯ ಮೇಲೆ ಅಸೀನರಾಗಿ ಸಾವಿರದೆಂಟು ಬಾರಿ ಗಾಯತ್ರೀ ಮಂತ್ರವನ್ನು, ವಿವಿಧ ಸೂಕ್ತಗಳನ್ನೂ, ಹಾಗೂ ಜಪಾನುಷ್ಠಾನಗಳನ್ನು ಪೂರೈಸಿದ್ದರು. ಸೀತಾರಾಮರ ಪಾದಕಮಲಗಳ ಗುರುತುಗಳನ್ನು ಮಾಡಿರುವುದು ಗೋಚರವಾಗುತ್ತದೆ. ಈ ಶಿಲೆಯಲ್ಲಿ ಪಂಚಲಿಂಗೇಶ್ವರ, ನಂದಿ, ಗಣೇಶನ ಕೆತ್ತನೆಗಳಿದ್ದ ಆಂಜನೇಯನ ವಿಗ್ರಹವಿರುವ ಗುಡಿಯೊಂದನ್ನು ಸಹ ಒಳಗೊಂಡಿದೆ. ಒಂದು ದಿನದಲ್ಲಿ ೩ ಅವತಾರಗಳನ್ನು ತಾಳುವ, ಪ್ರಾತಃ ಕಾಲದಲ್ಲಿ ಗಾಯತ್ರೀ, ಮಧ್ಯಾಹ್ನದಲ್ಲಿ ಸಾವಿತ್ರಿ, ಸಾಯಂಕಾಲದಲ್ಲಿ ಸರಸ್ವತಿ ಶ್ರೀಗಾಯತ್ರಿ ದೇವಿಯ ಚರಣಾರವಿಂದದ ಗುರುತು ಮತ್ತು ಸೂರ್ಯಚಕ್ರದ ಗುರುತು ಗಾಯತ್ರಿ ಶಿಲೆಯ ಮೇಲೆ ಅಚ್ಚಳಿಯದೆ ಇದೆ

**ಗೋಗರ್ಭ:**

ದೇವದಾನವರ ನಡುವೆ ನಡೆಯುತ್ತಿರುವ ಸಂಗ್ರಾಮದಲ್ಲಿ ಮಹಾವಿಷ್ಣುವಿನಿಂದಾಗಿ ಅಮೃತಪಾನ ಮಾಡಿರುವ ದೇವತೆಗಳು ರಾಕ್ಷಸರನ್ನು ಪರಾಜಿತಗೊಳಿಸಿದರು. ಹೀಗೆ ಸೋತಂತಹ ಅಸುರರು ತಮ್ಮ ಪೂಜ್ಯಗುರುಗಳಾದ ಶುಕ್ರಾಚಾರ್ಯರಲ್ಲಿಗೆ ಬಂದು ಪೂಜ್ಯಂ ಗುರುವರ್ಯ, ದೇವತೆಗಳು ಪೀಯೂಷಪಾಯಿಗಳಾಗಿ. ಜವರಾಯನ ಭಾದೆಯಿಲ್ಲದವರಾಗಿ ನಮ್ಮ ಕುಲವನ್ನೇ ಸಂಹಾರ ಮಾಡುತ್ತಿದ್ದಾರೆ. ತಾವು ದಯಮಾಡಿ ಹೇಗಾದರೂ ನಮಗೆ ಸಾವಿನಿ ನೆರಳು ತಾಗದಂತೆ ಮಾಡಬೇಕು ಎಂದು ಮುಂತಾಗಿ ಗೋಳಾಡುತ್ತಿರಲು, ಎಲೈ ಪುತ್ರರೆ ದುಃಖಿಸಬೇಡಿ ನಿಮ್ಮ ಸುಖ ಸಂತೋಷಕ್ಕೋಸ್ಕರವಾಗಿ ಸತ್ತವರನ್ನು ಮತ್ತೆ ಬದುಕಿಸಿಕೊಳ್ಳಬಹುದಾದ ಮೃತ ಸಂಜೀವಿನಿ ಎಂಬ ವಿಶಿಷ್ಟ ಮಂತ್ರವನ್ನು ಶೀಘ್ರವಾಗಿ ಸಿದ್ಧಿಸಿಕೊಡುತ್ತೇನೆ ಎಂದು ಶುಕ್ರಾಚಾರ್ಯರು ರಾಕ್ಷಸರಿಗೆ

ಸಮಾಧಾನಪಡಿಸಿ ದಕ್ಷಿಣ ದಿಕ್ಕನ್ನು ಕುರಿತು ಪ್ರಯಾಣ ಮಾಡಿ ವಾಸವಾಪುರದ ಕಾವೇರಿಯ ಮಧ್ಯದಲ್ಲಿರುವ ಗಾಯತ್ರಿಶಿಲೆಯ ಮೇಲೆ ದಕ್ಷಿಣಕ್ಕೆ ಅಭಿಮುಖವಾಗಿ ಒಂದೇ ಕಾಲಿನಲ್ಲಿ ನಿಂತು ಮಹದೇವನನ್ನು ಕುರಿತು ಮಹತ್ತರವಾದ ತಪಸ್ಸನ್ನಾರಂಭಿಸಿದರು. ಇದರಿಂದ ಭಯಗೊಂಡ ದೇವೇಂದ್ರನು ದೇವ ಗುರುಗಳಾದ ಬೃಹಸ್ಪತಿಯೇ ಮೊದಲಾದವರನ್ನು ಆಹ್ವಾನಿಸಿ ಮಂತ್ರಾಲೋಚನೆಯನ್ನು ಮಾಡಲು ಶುಕ್ರಾಚಾರ್ಯರನ್ನು ವಶಪಡಿಸಿಕೊಳ್ಳಲು ಊರ್ವಶಿಯನ್ನು ಕಾಮೋಪಯುಕ್ತವಾದ ವಸ್ತುಗಳನ್ನು ಸಿದ್ಧಪಡಿಸಲು ಕಾಮಧೇನುವನ್ನು, ಕಾಮಭಾಧೆಯನ್ನು ವೃಧ್ಧಿಗೊಳಿಸಲು ಮಂದಮಾರುತ ವಸಂತ ಹಾಗೂ ಮನ್ಮಥರನ್ನು ಕಳುಹಿಸಿ ಭೃಗು ಪುತ್ರರಾದ ಶುಕ್ರಾಚಾರ್ಯರ ತಪೋವಿಘ್ನವನ್ನುಂಟುಮಾಡುವುದೆಂದು ನಿರ್ಣಯಿಸಲಾಯಿತು.

ವಸಂತ ಪುಷ್ಪಗಳ ಪರಿಮಳವನ್ನು ಪಸರಿಸಿದಾಗ ಘೋರತಪದಲ್ಲಿ ಮಗ್ನರಾಗಿದ್ದ ಶುಕ್ರಾಚಾರ್ಯರು ಕಣ್ತೆರೆದರು. ಕೂಡಲೇ ಮದನ ಬಾಧೆಯನ್ನು ಪ್ರಕಟಿಸುತ್ತಾ ನಾಟ್ಯಮಾಡಲಾರಂಬಿಸಿದಳು ಊರ್ವಶಿ. ಇವಳ ವಕ್ಷೋಜಗಳ ಮೇಲಿನ ಸೀರೆಯ ಸೆರಗನ್ನು ಎತ್ತಿಕೊಂಡು ಹೋಗಲಾರಂಭಿಸಿದ ಮಂದಮಾರುತ ಅರೆಕ್ಷಣದಲ್ಲಿಯೇ ಮನ್ಮಥ ಶುಕ್ರಾಚಾರ್ಯರ ಮನಸ್ಸನ್ನು ಪ್ರವೇಶಿಸಿ ಕಲಕಲಾರಂಭಿಸಿದ. ಇಂದ್ರನ ಮಾತಿನಂತೆ ಕಾಮಧೇನು ರತಿಸುಖಕ್ಕೆ ಉಪಯುಕ್ತವಾದ ಸಾಧನವನ್ನು ಕಲಿಸಿಕೊಡುತ್ತಿದ್ದಳು. ಶುಕ್ರಾಚಾರ್ಯರ ಮನಸ್ಸು ಬಲು ವ್ಯಥೆಗೊಂಡಿತು. ಕೋಪೋದ್ರಿಕ್ತರಾಗಿ ಊರ್ವಶಿ ಕಾಮಧೇನುಗಳಿಗೆ ಶಿಲೆಯಾಗಿ ಎಂದು ಶಾಪನೀಡಿದರು. ಅನಂತರ ಊರ್ವಶಿಯ ಪ್ರಾರ್ಥನೆಗೆ ಕ್ಷಮಾಶೀಲರಾದ ಶುಕ್ರಾಚಾರ್ಯರು ಕರುಣೆಗೊಂಡು ರಾವಣನನ್ನು ಕೊಂದು ಶ್ರೀರಾಮಚಂದ್ರ ನಿನ್ನ ಸಮೀಪಕ್ಕೆ ಬಂದಾಗ ಶಾಪದಿಂದ ಮುಕ್ತಿಹೊಂದಿ ದೇವಲೋಕಕ್ಕೆ ತೆರಳು ಎಂದಾಗ ಊರ್ವಶಿ ಪೂಜ್ಯಮಹರ್ಷಿಯೆ ನಾನು ಕ್ಷಣಮಾತ್ರವೂ ಕಾಮಧೇನುವನ್ನು ಅಗಲಿರಲಾರೆ ಆದುದರಿಂದ ನಾವಿಬ್ಬರೂ ಒಂದಾಗಿ ಈ ಕ್ಷೇತ್ರದಲ್ಲಿರುವಂತೆ ಅಪ್ಪಣೆಮಾಡಬೇಕೆಂದು ಪ್ರಾರ್ಥಿಸಿಕೊಂಡಳು. ಆಗ ಶುಕ್ರಾಚಾರ್ಯರು ಸ್ವಲ್ಪ ಕ್ರೋಧಗೊಂಡವರಾಗಿ ಕಾಮಧೇನುವಿನ ಸಮೀಪದಲ್ಲಿ ಕರುವಿನಂತೆ ಬ್ರಹ್ಮಕಲ್ಪದವರೆಗೂ ಪ್ರಳಯದವರೆಗೂ ಇರು ಎಂದು ಹೇಳಿ ಕಾಮಧೇನುವಿಗೆ ಭಕ್ತರ ಸರ್ವಪಾಪಗಳನ್ನೂ ನಾಶಮಾಡಿ ಮನೋಭೀಷ್ಟವನ್ನು ನಿರಂತರ ಕರುಣಿಸಿ ಉದ್ಧರಿಸುತ್ತಿರು ಎಂಬುದಾಗಿ ವಿಶಾಪವನ್ನಿತ್ತು.

ಶೀಘ್ರದಲ್ಲಿಯೆ ಅಮೃತಸಂಜೀವಿನಿ ಎಂಬ ಅಪೂರ್ವ ಮಂತ್ರವನ್ನು ಸಿದ್ಧಪಡಿಸಿಕೊಂಡು ತಮ್ಮ ಲೋಕಕ್ಕೆ ತೆರಳಿದರು. ಈಗಲೂ ಮಹರ್ಷಿ ಶುಕ್ರಾಚಾರ್ಯರ ಪಾದ ಗಾಯತ್ರಿ ಶಿಲೆಯ ಮೇಲಿದೆ. ಶ್ರೀರಾಮ ತನ್ನ ಗುರುಗಳಾದ ವಸಿಷ್ಠರಿಂದ ಪ್ರೇರಿತನಾಗಿ ಈ ಕ್ಷೇತ್ರಕ್ಕೆ ಅಗಮಿಸಿದಾಗ ಶಿಲೆಯಾಗಿದ್ದ ಕಾಮಧೇನುವಿನ ಮುಂಭಾಗದಿಂದ ಪ್ರವೇಶಿಸಿ ಹಿಂಭಾಗದಲ್ಲಿ ಬಂದ. ಹೀಗೆ ಮಾಡುವಾಗ ಶ್ರೀರಾಮನ ಮುಕುಟದ ಕೆಂಪು ಹರಳೊಂದು ಪುಡಿಯಾಗಿ ಗೊರ್ಗಭವನ್ನು ಸ್ಪರ್ಶಿಸಲಾಗಿ ಗೋಗರ್ಭದ ಮರಳೆಲ್ಲಾ ಕೆಂಪು ಬಣ್ಣದಿಂದಕೂಡಿತು.

ಶ್ರೀರಾಮನೊಡನೆ ಸೀತಾಮಾತೆ, ವಸಿಷ್ಟರು, ಲಕ್ಷ್ಮಣ, ಹನುಮಂತ, ಸುಗ್ರೀವ, ಅಂಗದ, ವಿಭೀಷಣ, ಇನ್ನೂ ಮುಂತಾದ ವಾನರರೂ ರಾಕ್ಷಸರೂ ಗೋಜನನ ಮಾಡಿದವರೆಂಬ ಸಂಗತಿ ಭವಿಷ್ಯೋತ್ತರ ಪುರಾಣದ ಕಾವೇರಿ ಮಹಾತ್ಮೆಖಂಡದಲ್ಲಿ ಪ್ರಕಟವಾಗಿದೆ. ಭಕ್ತಿಪೂರ್ವಕವಾಗಿ ಕೈಮುಗಿದುಕೊಂಡು,

ಸುವರ್ಣವರ್ಣೇ ಗೋಮಾತಃ ಸರ್ವಪಾಪವಿನಾಶಿನಿ
ಕ್ಷೀರಾಬ್ಧಿಮದನೋದ್ಭೂತೇ ಸುರನಾಯಕ ನಾಯಕ
ವಸಿಷ್ಠಸ್ಯ ಪ್ರಿಯಕರಿ ವಿಶ್ವಾಮಿತ್ರಭಯಂಕರಿ
ಜಮದಗ್ನೇರಿಷ್ಟದಾತ್ರಿಕೃತವೀರ್ಯ ಸುತಾಪಹೇ
ಉಪಾಸಕಾನಾಂ ಮರ್ತ್ಯಾನಾಂ ವಿಷ್ಣುವತ್ಪ್ರೀತಿದಾಯಿನಿ
ಸರ್ವಪಾಪಕ್ಷಯಾಶ್ರುತ್ವಾ ಮಾಮುದ್ದರ ದಯಾನಿಧೇ.

ಎಂದು ಅಂತಃಕರಣ ಪೂರ್ವಕವಾಗಿ ಗೋವನ್ನು ಪ್ರಾರ್ಥಿಸಿ ಗೋಜನನ ಹಾಗೂ ಪೂಜಾದಿಗಳನ್ನು ಮಾಡಿದರೆ ಪಂಚಮಹಾಪಾತಕಾದಿಯಾಗಿ ಸಮಪ್ತಪಾಪಗಳೂ ಭಸ್ಮವಾಗಿ ವಿಷ್ಣುಲೋಕ ಲಭಿಸುವುದೆಂಬುದು ಪುರಾಣ ಪ್ರಸಿದ್ಧ.

ರಾಮೇಶ್ವರಾಗಸ್ತ್ಯೇಶ್ವರರ ಮಧ್ಯಭಾಗದಲ್ಲಿರುವ ಕಪಿಲೆ ಗೋವು ಅರ್ಥಾತ್ ಕಾಮಧೇನು ಚಿನ್ನ ವರ್ಗವುಳ್ಳದ್ದಾಗಿರುತ್ತದೆ. ಎಷ್ಟಾದರೂ ಇವು ಕಲಿಯುಗದ ಈ ಮನುಷ್ಯರಿಗೆ ಬಂಗಾರದಂತೆ ಗೋಗರ್ಭ ಕಾಣಲಾರದು ಪಶುಪಕ್ಷಿಗಳಂತಹ ಮೂಕಪ್ರಾಣಿಗಳು ಮಾತ್ರ ಈ ಸುವರ್ಣ ವರ್ಣದ

ಗೋಗರ್ಭವನ್ನು ಕಾಣಬಹುದು ಎನ್ನುತ್ತಾರೆ. ಈ ಗೋಗರ್ಭದ ಸನಿಹದಲ್ಲಿಯೇ ಇರುವ 'ಊರ್ವಶಿ ಶಿಲೆ' ಬೆಳೆಯುತ್ತಲಿದೆ. ಸ್ವಲ್ಪದೂರದಲ್ಲಿ ಮೇನಕಾಶಿಲೆ ಇದೆ. ಈ ಶಿಲೆಯಲ್ಲಿ ರುದ್ರಪಾದವೂ ಇದೆ.

ಗೋಗರ್ಭದ ಸಾಮಿಪ್ಯದಲ್ಲೇ ಹನುಮಂತನ ಗೋವು ಕೂಡ ಇದೆ. ಸಂಗಡವೇ ಯಮತೀರ್ಥವೂ ಇದೆ. ಈ ಗೋವಿನಲ್ಲಿ ನುಗ್ಗುವ ಪ್ರಯತ್ನ ಮಾಡಿದರೆ ಯಮನ ಬಾಗಿಲನ್ನು ಕಟ್ಟಿದಂತೆಯೇ ಸರಿ. ಪುಣ್ಯ ಜನಕವಾದ ಕಪಿಲಾ ಶಿಲೆಯ ಬಳಿ ಕಪಿಲಾ ತೀರ್ಥವೂ ಇದೆ.

**ಗೌತಮ ಶಿಲೆ:-**

ಪರಮಪವಿತ್ರವಾದ ಶ್ರೀಕ್ಷೇತ್ರ ರಾಮನಾಥಪುರದಲ್ಲಿ ಇಂದು ಈ ಗೌತಮ ಶಿಲೆ ತನ್ನ ದರ್ಶನವನ್ನು ನೀಡದೆ ಇತಿಹಾಸದ ಪುಟವನ್ನು ಸೇರಿರುವುದು ದುರದೃಷ್ಟಕರ ಮಾತ್ರವಲ್ಲ ಶೋಚನೀಯವೂ ಹೌದು. ಇಂದು ಉಳಿದಿರುವುದು ಅದರ ಅಸ್ಪಷ್ಟ ನೆನಪುಗಳು ಮಾತ್ರ.

ಪೂರ್ವದಲ್ಲಿ ಸಪ್ತರ್ಷಿಗಳು ಈ ಗೌತಮಶಿಲೆಯಲ್ಲಿ ಜಪತಪಾನುಷ್ಠಾನ ಮಾಡುತ್ತಿದ್ದರು. ಈ ಶಿಲೆಯ ಮೇಲೆ ಮಹರ್ಷಿ ಗೌತಮರ ಪಾದದ ಗುರುತು ಇತ್ತು. ಸುಮಾರು ಮೂವತ್ತು, ನಲವತ್ತು, ಅಡಿ ವ್ಯಾಸವಿದ್ದ ಈ ಶಿಲೆ ಹತ್ತರಿಂದ ಹದಿನೈದು ಅಡಿ ಎತ್ತರವಿತ್ತು. ಛತ್ರಿಯಾಕಾರದಲ್ಲಿದ್ದ ಈ ಗೌತಮಶಿಲೆ ಒಂದು ಅಪೂರ್ವವೇ ಸರಿ ಹಿಂದೆ ಅತಿವೃಷ್ಟಿ ಬಂದಾಗ ಊರಿನವರು ಸುಮಾರು ೬೦,೭೦ ಜನರು ಗೌತಮ ಶಿಲೆಯನ್ನು ಆಶ್ರಯಿಸುತ್ತಿದ್ದರು. ಕ್ರಿ. ಶ. ೧೯೩೫ರ ಡಿಸೆಂಬರ್ ೯ರಂದು ರಾಮನಾಥಪುರ ಮತ್ತು ಮಲ್ಲರಾಜಪಟ್ಟಣದ ನಡುವೆ ಸೇತುವೆ ನಿರ್ಮಾಣ ಪ್ರಾರಂಭವಾಯಿತು. ಆಗಿನ ಆಂಗ್ಲ ಚಕ್ರವರ್ತಿ ೫ನೇ ಜಾರ್ಜ್‌ನ ಆಜ್ಞಾನುಸಾರ ಈ ಸೇತುವೆ ನಿರ್ಮಾಣಕ್ಕಾಗಿ ಪುರಾತನವೂ ಪವಿತ್ರವೂ ಆದ ಈ ಬೃಹತ್ ಗೌತಮ ಶಿಲೆಗೆ ಸಿಡ್ಡಿಮದ್ದು ಹಾಕಿ ಸ್ಫೋಟಿಲಾಯಿತು. ಅದು ಸ್ಫೋಟಗೂಂಡಾಗ ಮೂರು ಭಾಗವಾಗಿ ರಾಮ, ಕೃಷ್ಣ, ಗೋವಿಂದ, ಧ್ವನಿ ಕೇಳಿತೆಂದೊ ಹಿರಿಯರು ನುಡಿಯುತ್ತಾರೆ.

ಆ ಅಕ್ಷಮ್ಯ ಕೃತ್ಯಕ್ಕೆ ಗ್ರಾಮವಾಸಿಗಳ ಪ್ರಚಂಡ ಖಂಡನೆಯಿದ್ದರೂ ಅವೆಲ್ಲವೂ ಗೋರ್ಕಲ್ಲ ಮೇಲೆ ಮಳೆ ಸುರಿದಂತೆ , ಕೋಣನ ಮುಂದೆ ಕಿನ್ನರಿ ಬಾರಿಸಿದಂತಾಯಿತು. ಇಂತಹ ಅರ್ಘ್ಯ ಪವಿತ್ರ ಶಿಲೆಯ, ಶಾಪವೋ ಎಂಬಂತೆ ಇದನ್ನು ಧ್ವಂಸಗೋಳಿಸಿದ ಚಕ್ರವರ್ತಿಯು ಕೆಲವೆ ಸಮಯದೊಳಗಾಗಿ ಮೃತ್ಯುವಶವಾದ ವರ್ತಮಾನ ತಿಳಿದುಬಂದಿತ್ತು.

**ಕ್ಷೇತ್ರದ ಇನ್ನಿತರ ದೇವಾಲಯಗಳು**

ರಾಮನಾಥಪುರದಲ್ಲಿ ಈವರೆಗೆ ವಿಶ್ಲೇಷಿಸಿದ ದೇವಾಲಯಗಳಲ್ಲದೆ ಇನ್ನು ಕೆಲವು ದೇವಾಲಯಗಳು ಗುಡಿಗಳನ್ನು ಕಾಣಬಹುದಾಗಿದೆ. ಈ ದೇವಾಲಯಗಳು ಸಹ ಗತಕಾಲವನ್ನು ನೆನಪಿಸುವಂತಹವು. ಆಂತಹ ದೇವಾಲಯಗಳಲ್ಲಿ ಒಂದು.

**ಲಕ್ಷ್ಮಣೇಶ್ವರನ ದೇವಸ್ಥಾನ :**

ಹೊಯ್ಸಳ ಸೋಮೇಶ್ವರನ ಕಾಲ ೧೨೩೪-೧೨೪೨ ಈ ಅವಧಿಯಲ್ಲಿ ಲಕ್ಷ್ಮಣೇಶ್ವರನ ದೇವಸ್ಥಾನ ನಿರ್ಮಿತವಾಗಿರಬಹುದು. ಈ ದೇವಸ್ಥಾನವಿಂದು ಪೂಜೆಯಿಲ್ಲದೆ ನಿರ್ವಹಣೆ ಇಲ್ಲದೆ ಶಿಥಿಲವಾಗುತ್ತಾ ದುರಂತದತ್ತ ದಾಪುಗಾಲು ಹಾಕುತ್ತಿರುವುದು ದುಃಖಕರ. ಈ ದೇವಾಲಯವು ಕಾವೇರಿ ನದಿಯ ದಕ್ಷಿಣ ದಂಡೆಯ ಮೇಲಿದೆ. ಇಲ್ಲಿಗೆ ಹೋಗಲು ಕಷ್ಟವಾಗುವುದರಿಂದ ಈ ದೇವಾಲಯ ಶಿಥಿಲವಾಗಿರಬಹುದು ಆದರೆ ಹಿಂದೊಮ್ಮೆ ಈ ದೇವಸ್ಥಾನ ಉತ್ತಮ ಕಲಾಶೈಲಿಯ ಗೋಪುರಗಳಿಂದ ಕೂಡಿತ್ತು. ಆದರೆ ಆ ಗೋಪುರವೆಲ್ಲವೂ ಕುಸಿದು ಬಿದ್ದು ಇಂದು ಚಪ್ಪಡಿಗಳಿಂದ ಆವೃತವಾದ ಗರ್ಭಗುಡಿ ಮಾತ್ರ ಕಾಣಸಿಗುತ್ತದೆ. ಹಾಗೆಯೇ ದೇವಾಲಯದ ಸುತ್ತ ೯ ಅಡಿ ಎತ್ತರದ ದೊಡ್ಡ ಗೋಡೆ ಇದ್ದರು, ಅದು ಬಹುಭಾಗ ಬಿದ್ದು ಹೋಗಿದೆ. ಈ ದೇವಸ್ಥಾನದ ಸುತ್ತ ಗಿಡ ಪೊದೆಗಳು ಬೆಳೆದಿವೆ. ಈ ದೇವಾಲಯದಲ್ಲಿ ಸುಂದರವಾದ ಶಿವಲಿಂಗ ಮತ್ತು ನಂದೀಶನ ವಿಗ್ರಹವಿದೆ. ಈ ದೇವಾಲವನ್ನು ನೋಡುತ್ತಿದ್ದರೆ ಹಂಪೆಯು ನೆನಪಾಗುವುದರಲ್ಲಿ ಸಂದೇಹವಿಲ್ಲ. ಈಗ ದೇವಾಲಯವು ಎಮ್ಮೆ, ಹಸುಗಳಿಗೆ, ವಿಶ್ರಾಂತಿಯ ತಾಣವಾಗಿರುವುದು ವಿಷಾದನೀಯ ಸಂಗತಿ.

**ಶ್ರೀ ಲಕ್ಷ್ಮೀ ನರಸಿಂಹಸ್ವಾಮಿ ದೇವಾಲಯ:**

ಈ ಕ್ಷೇತ್ರಕ್ಕೆ ಶ್ರೀ ಸುಬ್ರಹ್ಮಣ್ಯ ಮಠಾಧಿಪತಿ ಶ್ರೀ ವಿಬುಧೇಶ ತೀರ್ಥರು ಚಿತ್ತೈಸಿದಾಗ ಪೂರ್ವಾಭಿಮುಖವಾಗಿ ಶ್ರೀ ಲಕ್ಷ್ಮೀ ನರಸಿಂಹ ಸ್ವಾಮಿಯ ಅತಿ ಸುಂದರವಾದ ಪ್ರತಿಮೆಯನ್ನು ಪ್ರತಿಷ್ಠಾಪಿಸಿದ್ದಾರೆ. ಸಪ್ತಕ್ಷೇತ್ರಗಳಲ್ಲಿ ಪವಿತ್ರವಾದ ಕುಮಾರಾದ್ರಿಯ ಕುಕ್ಕೇಸುಬ್ರಹ್ಮಣ್ಯ ಕ್ಷೇತ್ರ ಗುಹೆಯಲ್ಲಿ ಶ್ರೀ ಮನ್ನಾರಯಣನ ಸ್ವರೂಪಿಯಾದ ಶ್ರೀ ನರಸಿಂಹನನ್ನು ಸ್ಕಂದ ತನ್ನ ಹೃದಯ ಗುಹೆಯಲ್ಲಿ ಆರಾಧಿಸಿದ. ಅದುದರಿಂದ ಸುಬ್ರಹ್ಮಣ್ಯನಿಗೆ ಶ್ರೀ ನರಸಿಂಹ ಅತಿಪ್ರಿಯ,

ಹದಿನಾಲ್ಕನೇ ಶತಮಾನದಲ್ಲಿ ಭಟ್ಟಾಚಾರ್ಯ, ಸಂಸ್ಥಾನಾಧಿಪತಿಗಳಾದ ಶ್ರೀ ನರಸಿಂಹ ತೀರ್ಥರನ್ನು ವಿದ್ವತ್ಸಭೆಯಲ್ಲಿ ನಿರುತ್ತರರನ್ನಾಗಿಸಿ ಶ್ರೀ ಹರಿಯೇ ಸರ್ವೋತ್ತಮ ಎಂದು ಸ್ಥಾಪಿಸಿ ಅವರಿಂದ ಪಣಪೂರ್ವಕವಾಗಿ ಪಡೆದ ಪ್ರತಿಮೆಗಳಲ್ಲಿ ಪ್ರಮುಖವಾದ ಶ್ರೀ ಪರುಶರಾಮಕರಾರ್ಜಿತ ಯಜ್ಞಮೂರ್ತಿ ಶ್ರೀ ಲಕ್ಷ್ಮೀ ನರಸಿಂಹನನ್ನು ಶ್ರೀ ಮನ್ಮಧ್ವಾಚಾರ್ಯರು ತಾವು ಅರ್ಚಿಸಿ ಶ್ರೀ ಅನಿರುದ್ಧತೀರ್ಥರಿಗೆ ಕರುಣಿಸಿದ್ದಾರೆ. ಆದ ಕಾರಣ ಶ್ರೀ ಸುಬ್ರಹ್ಮಣ್ಯ ಸಂಸ್ಥಾನಾಧಿಪತಿಗಳಿಗೆಲ್ಲರಿಗೂ ಸಹಜವಾಗಿಯೇ ಶ್ರೀ ಲಕ್ಷ್ಮೀ ನರಸಿಂಹ ಸ್ವಾಮಿಯೇ ಆರಾಧ್ಯದೈವ. ಆದುದರಿಂದ ಪರಮ ಮಂಗಳಧಾಮವಾದ ರಾಮನಾಥಪುರದಲ್ಲಿ ವಿಬುಧೇಶ ತೀರ್ಥರು ಶ್ರೀ ಲಕ್ಷ್ಮೀ ನರಸಿಂಹ ಸ್ವಾಮಿಯ ಪ್ರತಿಮೆಯನ್ನು ಪ್ರತಿಷ್ಠಾಪಿಸಿದ್ದಾರೆ.

**ಶ್ರೀ ವ್ಯಾಸಾಂಜನೇಯ ದೇವರು:**

ಭರತ ವರ್ಷದಲ್ಲಿ ಸಮಸ್ತ ಶ್ರೇಷ್ಠ ತೀರ್ಥಗಳಿಂದ ಸಂಯುಕ್ತಳಾದ ಕಾವೇರಿಯಿರುವ ವಾಸವಾಪುರಿಗೆ ರಾಮನಾಥಪುರಕ್ಕೆ ಶ್ರೀ ವ್ಯಾಸರಾಜ ಗುರು ಸಾರ್ವಭೌಮರು ಪಾದಾರ್ಪಣೆ ಮಾಡಿದಾಗ ಪುಣ್ಯದಾಯಕಳಾದ ಕಾವೇರಿ ಉತ್ತರ ತಟದಲ್ಲಿ ಶ್ರೀ ಅಗಸ್ತ್ಯೇಶ್ವರ ದೇವಸ್ಥಾನದ ಬಲಗಡೆ ಹನುಮಂತನನ್ನು ಪ್ರತಿಷ್ಠಾಪಿಸಿರುವುದರಿಂದ ಶ್ರೀ ವ್ಯಾಸಾಂಜನೇಯ ಎಂಬ ಹೆಸರು ಪ್ರಚಲಿತವಾಯಿತು. ಸರಿ ಸುಮಾರು ೬೦೦ ವರ್ಷ ಹಳೆಯದೆಂಬ ನಂಬಿಕೆಯಿದೆ. ಹಿಂದೆ ಸ್ಕೂಲ್ ಮಾಸ್ಟರ್ ಪೂಜೆ ಮಾಡುತ್ತಿದ್ದರು. ಆನಂತರ ಬಾಗಿಲು ಹಾಕುತ್ತಿದ್ದರು. ಆದರೆ ಈಗ ಸದಾ ನಿತ್ಯ ದರ್ಶನಕ್ಕೆ ಲಭ್ಯವಿದೆ.

**ಶ್ರೀ ಪ್ರಾಣ ದೇವರು:**

ಶ್ರೀ ಮದಾನಂದತೀರ್ಥ ಭಗವತ್ಪಾದರು ದ್ವೈತಮತವನ್ನು ಉದ್ಧರಿಸಿದರು. ಮಂತ್ರಾಲಯಸ್ಥರಾಗಿರುವ ಶ್ರೀ ಮದ್ರಾಘವೇಂದ್ರ ತೀರ್ಥಶ್ರೀಪಾದರು ಈ ಕ್ಷೇತ್ರಕ್ಕೆ ಚಿತ್ತೈಸಿದಾಗ ಶ್ರೀ ಪ್ರಾಣದೇವರನ್ನು ಪ್ರತಿಷ್ಠಾಪಿಸಿದರು. ಶ್ರೀ ಗುರುರಾಘವೇಂದ್ರರು ಅನುಗ್ರಹಿಸಿದ ಪ್ರಾಣದೇವರ ಆಲಯವಿಂದು ಕಾಕು ಜನರ ಅತಿಕ್ರಮದಿಂದಾಗಿ ನೆಲಸಮವಾಗಿರುವುದು ಅತ್ಯಂತ ವಿಷಾದನೀಯ.

**ಶ್ರೀ ಆಂಜನೇಯ:**

ಶ್ರೀ ಉತ್ತರಾದಿ ಮಠದ ಶ್ರೀ ಸತ್ಯಧ್ಯಾನ ತೀರ್ಥ ಶ್ರೀ ಪಾದಂಗಳವರು ಪುಣ್ಯ ಕ್ಷೇತ್ರಕ್ಕೆ ಆಗಮಿಸಿ ಶ್ರೀ ಆಂಜನೇಯನನ್ನು ಸ್ಥಾಪಿಸಿದ್ದಾರೆ. ಈ ದೇವಸ್ಥಾನ ರಕ್ಷಣೆಯಿಲ್ಲದೇ ಪ್ರಕೃತಿಯ ಆರ್ಭಟಕ್ಕೆ ಬಿದ್ದು ಹೋದಾಗ ೧೯೨೮ರಲ್ಲಿ ಜೀರ್ಣೋದ್ಧಾರ ಕಾರ್ಯ ನಡೆಯಿತು.

**ಶ್ರೀ ನರಸಿಂಹ:**

ವಿಶಿಷ್ಟಾದ್ವೈತ ಮತ ಸ್ಥಾಪಕರಾದ ಶ್ರೀ ರಾಮನುಜಾಚಾರ್ಯರು, ಇವರಿಗೆ ೭೪ ಮಂದಿ ಪ್ರಮುಖ ಶಿಷ್ಯಂದಿರು. ಈ ಶಿಷ್ಯ ವೃಂದದಲ್ಲಿ ಸೋಮಾಶಿಯಾಂಡನ್ ಎಂಬುವರು ಪ್ರಧಾನ ಆಚಾರ್ಯರು ತಮ್ಮ ಗುರುಗಳಂತೆಯೇ ಇವರು ನರಸಿಂಹದೇವರ ಆರಾಧಕರು ಹಾಗೂ ಪರಮಭಕ್ತರು. ಪರಕಾಲ ಮಠದ ಶ್ರೀ ಶ್ರೀಗಳವರ ಸನ್ನಿಧಾನದಲ್ಲಿ ಸೋಮಾಶಿಯಾಂಡನ್ ಆಚಾರ್ಯರ ಶಿಷ್ಯರು ಶ್ರೀ ಲಕ್ಷ್ಮೀನರಸಿಂಹ ದೇವರ ಸೊಗಸಾದ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದಾರೆ ಈ ದೇಗುಲ ದ್ಯಾನಮಂದಿರದಂತೆ ಗೋಚರಿಸುತ್ತದೆ

**ಬಸವನ ಗುಡಿ:**

ಈ ದೇವಾಲಯ ಹೊಳೆಯ ದಂಡೆಗೆ ಸೇರಿಕೊಂಡಂತೆ ಊರಿನ ಹೃದಯ ಭಾಗದಲ್ಲಿದೆ. ಇದು ದೊಡ್ಡ ದೇವಾಲಯ ಅಲ್ಲವಾದರೂ ಇತಿಹಾಸವನ್ನು ಸಾರಿ ಹೇಳುವಂತಿದೆ. ಈ ದೇವಸ್ಥಾನದ ಸುತ್ತ ಮುತ್ತ ಗಿಡಪೊದೆಗಳಿಂದ ಆವೃತವಾಗಿದ್ದನ್ನು ಬಸವಾಪಟ್ಟಣದ ಪದವಿ ಪೂರ್ವ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆಯ ಘಟಕದ ಸ್ವಯಂ ಸೇವಕರು ಸ್ವಚ್ಛಗೊಳಿಸಿದ್ದಾರೆ.

**ಕಾಲುವೆ ಅಮ್ಮನಗುಡಿ:**

ಗ್ರಾಮ ದೇವತೆಯಾದ ಕಾಲುವೆ ಅಮ್ಮನ ಗುಡಿ ಮೈಸೂರಿನಿಂದ ರಾಮನಾಥಪುರಕ್ಕೆ ಹೋಗುವ ರಸ್ತೆಯ ಮೊದಲಲ್ಲೆ ಎಡಭಾಗದಲ್ಲಿದೆ. ಇಲ್ಲಿ ಕಾವಲಮ್ಮ ಉದ್ಭವ ಶಿಲೆಯಾಗಿದ್ದು ಶಂಕರಾಚಾರ್ಯರು ಶ್ರೀ ಕ್ಷೇತ್ರಕ್ಕೆ ಆಗಮಿಸಿದಾಗ ಈ ಶಿಲೆಯನ್ನು ಪೂಜಿಸಿದ್ದಾರೆ. ಕಾಲಕ್ರಮೇಣ

ಕಾವಲಮ್ಮನ ದೇವಸ್ಥಾನ ಕಾಲುವೆ ಪಕ್ಕವಿದ್ದುದರ ಪರಿಣಾಮವಾಗಿ ಕಾಲುವೆ ಅಮ್ಮ ಎಂದು ಜನರು ಕರೆಯಲಾರಂಬಿಸಿದರು. ಈ ದೇವಸ್ಥಾನಕ್ಕೆ ಶುಕ್ರವಾರ ಮತ್ತು ಮಂಗಳವಾರ ವಿಶೇಷ ಪೂಜೆ ನೆರವೆರಿಸಲಾಗುತ್ತದೆ. ಪ್ರತಿ ೫ ವರ್ಷಕ್ಕೊಮ್ಮೆ ಬಂಡಿಹಬ್ಬವನ್ನು ಆಚರಿಸಲಾಗುತ್ತದೆ. ಆದರೆ ಕಾರಣಾಂತರಗಳಿಂದ ೩೦ ವರ್ಷಗಳಿಂದ ಬಂಡಿ ಹಬ್ಬವನ್ನೇ ಮಾಡಿರಲಿಲ್ಲ. ಕಳೆದ ವರ್ಷ ಈ ಹಬ್ಬವನ್ನು ಆಚರಿಸಲಾಯಿತು. ಈ ಹಬ್ಬದಲ್ಲಿ ಕಾಲುವೆ ಅಮ್ಮನಿಗೆ ಮರಿಗಳನ್ನು ಬಲಿ ಕೊಟ್ಟು ತಳಿಗೆ ಮಾಡಿ ನೈವೇದ್ಯ ಸಲ್ಲಿಸುತ್ತಾರೆ. ಈ ಹಬ್ಬದಲ್ಲಿ ಬ್ರಾಹ್ಮಣರು ಯಜ್ಞ ಯಾಗಾದಿಗಳನ್ನು ಮಾಡುತ್ತಾರೆ. ಗ್ರಾಮ ದೇವತೆಯನ್ನು ಊರೆಲ್ಲಾ ಮೆರವಣಿಗೆ ಮಾಡುತ್ತಾರೆ. ೪೮ ದಿನಗಳ ಕಾಲ ಬ್ರಾಹ್ಮಣರೇ ಪೂಜೆ ಮಾಡಬೇಕು ಅನಂತರದಲ್ಲಿ ಇತರರೆಲ್ಲಾ ಪೂಜೆ ಸಲ್ಲಿಸುತ್ತಾರೆ. ೫ ವರ್ಷಗಳಿಗೊಮ್ಮೆ ಗ್ರಾಮದೇವತೆ ಹಬ್ಬವನ್ನಾಚರಿಸಿವುದರಿಂದ ವಿಶೇಷವಾಗಿ ಈ ಹಬ್ಬವನ್ನು ಆಚರಣೆ ಮಾಡುತ್ತಾರೆ.

ಈ ಪ್ರಮುಖ ದೇವಾಲಯಗಳಲ್ಲದೆ ಕ್ಷೇತ್ರ ಪಾಲಕನಾದ ವಾಸವಾಪುರಿ ಶ್ರೀ ಆಂಜನೇಯ ದೇವಸ್ಥಾನ ಕಾವೇರಿ ನದಿಗೆ ದಕ್ಷಿಣದಲ್ಲಿರುವುದರಿಂದ ಇದು ಮಲ್ಲರಾಜಪಟ್ಟಣಕ್ಕೆ ಸೇರಿದೆ. ಇದಲ್ಲದೆ ಶ್ರೀ ಪರಮಕಾಲ ಮಠದಲ್ಲಿರುವ ಶ್ರೀ ಹಯಗ್ರೀವಮೂರ್ತಿ ಆರ್ಯ ವೈಶ್ಯರ ಛತ್ರದಲ್ಲಿರುವ ಶ್ರೀಕನ್ನಿಕಾಪರಮೇಶ್ವರಿ ಪ್ರಮುಖ ವಾಹನ ನಿಲ್ದಾಣದ ಬಳಿಯಿರುವ ಗ್ರಾಮದ ಶಕ್ತಿ ದೇವತೆ ಕೋಟವಾಳಮ್ಮ, ಶ್ರೀ ಕಾಲುವೆಅಮ್ಮನವರ ಸನ್ನಿಧಿಯಲ್ಲಿರುವ ಶ್ರೀ ಕನ್ನಂಬಾಡಿಯಮ್ಮನವರಲ್ಲದೆ ಅನೆಕಾನೇಕ ದೈವ ಸನ್ನಿಧಿಗಳ ಬೀಡು ಈ ಸುಕ್ಷೇತ್ರ.

**ಮತತ್ರಯಾಚಾರ್ಯರು:**

ಈ ಕ್ಷೇತ್ರದ ಇನ್ನೊಂದು ವಿಶೇಷವೆಂದರೆ ಮೂರು ಜನ ಆಚಾರ್ಯರು ಅಂದರೆ ಶಂಕರಾಚಾರ್ಯ, ರಾಮಾನುಜಾಚಾರ್ಯ ಹಾಗು ಮಧ್ವಾಚಾರ್ಯರು ಇಲ್ಲಿಗೆ ಆಗಮಿಸಿದ್ದರು. ಆದಿ ಶಂಕರಾಚಾರ್ಯರು ಇಲ್ಲಿಗೆ ಶ್ರೀ ರಾಮೇಶ್ವರನನ್ನು ಪೂಜಿಸಿ ಇದೇ ದೇವಸ್ಥಾನದಲ್ಲಿ ಶ್ರೀ ಇಂದ್ರಾಕ್ಷಮ್ಮನವರನ್ನು ಶ್ರೀ ವಿಶಾಲಾಕ್ಷಮ್ಮನವರನ್ನು ಪ್ರತಿಷ್ಠಾಪಿಸಿರುವುದಲ್ಲದೇ ಶ್ರೀ ಇಂದ್ರಾಕ್ಷಮ್ಮನವರ ಎದುರಿನಲ್ಲಿ ಗ್ರಹಪೀಡಾದಿಗಳಿಗೆ ಮಾರಕವಾದ ತಾಮ್ರದ ಶ್ರೀಚಕ್ರವನ್ನು ಸ್ಥಾಪನೆ

ಮಾಡಿರುವರು. ಅನಂತರ ಈ ಕ್ಷೇತ್ರದ ಶಕ್ತಿ ದೇವತೆಯಾದ ಶ್ರೀದುರ್ಗಾದೇವತೆ ಕಾಲುವೆ ಅಮ್ಮನವರನ್ನು ಪೂಜಿಸಿರುವರು.

ದ್ವೈತ ಮತವನ್ನು ಸ್ಥಾಪಿಸುವ ಸಲುವಾಗಿ ಅವತರಿಸಿದ ಶ್ರೀಮಧ್ವಾಚಾರ್ಯರು ಮತ್ತು ವಿಶಿಷ್ಟಾದ್ವೈತ ಮತ ಸ್ಥಾಪಕರಾದ ಶ್ರೀರಾಮಾನುಜಾಚಾರ್ಯರು ಈ ಸುಕ್ಷೇತ್ರಕ್ಕೆ ಯಾತ್ರಾರ್ಥಿಯಾಗಿ ದಯಮಾಡಿಸಿದ್ದರೆಂದು ಐತಿಹ್ಯವಿದೆ. ಹೀಗೆ ಅನೇಕ ಮಹಾ ಪುರುಷರು ಆಚಾರ್ಯರ ಋಷಿಮುನಿಗಳ ಪಾದದ ಧೂಳಿನಿಂದ ಪವಿತ್ರವಾಗಿರುವ ಶ್ರೀ ಕ್ಷೇತ್ರವು 'ದಕ್ಷಿಣ ಕಾಶಿ' ಯೆಂದೇ ಪ್ರಸಿದ್ಧವಾಗಿದ್ದು ಅನೇಕ ಭಕ್ತಾದಿಗಳನ್ನೂ ಪ್ರವಾಸಿಗರನ್ನೂ ಕೈ ಬೀಸಿ ಕರೆಯುತ್ತಿದೆ.

## ಶಾಸನಗಳಲ್ಲಿ ರಾಮನಾಥಪುರ – ೮

ಚರಿತ್ರೆ ಅಧ್ಯಯನದಲ್ಲಿ ಶಾಸನಗಳು ಮೂಲಾಧಾಗಳೆನಿಸಿವೆ. ಈ ಶಾಸನಗಳು ಚರಿತ್ರೆಯನ್ನು ಬದಲಿಸುವಷ್ಟು ಶಕ್ತಿಶಾಲಿಯಾದಂತವುಗಳು ಕರ್ನಾಟಕದಲ್ಲಿ ಶಾಸನಗಳು ಹೇರಳವಾಗಿ ದೊರೆತಿವೆ. ಅದರಲ್ಲೂ ಹಾಸನ ಜಿಲ್ಲೆ ಶಾಸನಗಳ ತವರೂರೆನಿಸಿದೆ. ಹಾಸನಜಿಲ್ಲೆಯ ಪ್ರತಿ ಗ್ರಾಮಗಳಲ್ಲಿಯೂ ಶಾಸನಗಳನ್ನು ಕಾಣಬಹುದಾಗಿದೆ. ಕನ್ನಡದ ಮೊಟ್ಟ ಮೊದಲ ಶಾಸನವಾದ ಹಲ್ಮಿಡಿ ಶಾಸನ ದೊರೆತದ್ದು ಹಾಸನ ಜಿಲ್ಲೆಯಲ್ಲಿ. ಅಂತೆಯೇ ಶ್ರೀ ಕ್ಷೇತ್ರ ರಾಮನಾಥಪುರದಲ್ಲೂ ಹಲವು ಶಾಸನಗಳು ಸಿಕ್ಕಿದ್ದು ಅವುಗಳಿಂದ ನಮಗೆ ರಾಮನಾಥಪುರದ ಇತಿಹಾಸವನ್ನು ತಿಳಿಯಲು ಸಹಾಯಕವಾಗಿದೆ.

ರಾಮನಾಥಪುರದಲ್ಲಿ ದೊರೆತ ಹೆಚ್ಚು ಶಾಸನಗಳು ರಾಮೇಶ್ವರ ದೇವಾಲಯದಲ್ಲಿಯವೇ ಆಗಿದೆ. ರಾಮೇಶ್ವರ ದೇವಾಲಯಕ್ಕೆ ದತ್ತಿಯಾಗಿ ನೀಡಿರುವ ಗ್ರಾಮಗಳ ಸಂಪೂರ್ಣ ವಿವರ ಈ ಶಾಸನಗಳಲ್ಲಿವೆ. ಇದಲ್ಲದೆ ಸುಬ್ರಹ್ಮಣ್ಯ ಸ್ವಾಮಿ ದೇವಾಲಯದಲ್ಲಿಯ ಕೆಲ ಶಾಸನಗಳು ದೊರೆತಿವೆ. ರಾಮೇಶ್ವರ ದೇವಸ್ಥಾನದಲ್ಲಿರುವ ಶಾಸನಗಳ ಸಾರಾಂಶ ಈ ಕೆಳಕಂಡತಿದೆ. ದಕ್ಷಣಾಮೂರ್ತಿಯ ಹಿಂಭಾಗದಲ್ಲಿರುವ ನಾಲ್ಕು ಕಲ್ಲುಗಳ ಮೇಲೆ ಈ ರೀತಿ ಕೆತ್ತಲಾಗಿದೆ. "ಹೊಯ್ಸಳ ಸೋಮೇಶ್ವರ ಹಿರಿಯ ಸಂಧಿವಿಗ್ರಹಿ ಬೊಮ್ಮಣ ದಂಡನಾಯಕನ ಸೇವಕನಾದ ಕಾಶ್ಯಪಗೋತ್ರದ ವಾಮರಸನ ಮಗ ಕಲ್ಲಯ್ಯನ ಸ್ಥಾನಿಕರಾದ ಮಾದಜೀಯ, ದೇವದಾಸಿ, ಕಾಳಜೀಯ ಮಂತಾದವರಿಂದ ಕ್ರಯಕ್ಕೆ ತೆಗೆದುಕೊಂಡು ಹೂದೋಟವನ್ನು ರಾಮನಾಥದೇವರ ಪೂಜೆಗೆಂದು ದತ್ತಿಕೊಟ್ಟು ಉದ್ಯಾನವನದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವವರಿಗೆ ೩೦ ಕೊಳಗ ಭೂಮಿಯನ್ನು ದತ್ತಿಕೊಟ್ಟ ಶಾಸನ, ಇದರ ಕಾಲ ಶಕವರ್ಷ ೧೧೭೩[ಕ್ರಿ ಶ ೧೨೫೦]. ಮುಂದೆ ಇದೇ ದಾನಿಯಾದ ಕಲ್ಲಯ್ಯ ಉದ್ಯಾನವನದ ಮೇಲ್ವಿಚಾರಣೆಗೆಂದು ಹಿಂದೆ ಕೊಟ್ಟ ೩೦ ಕೊಳಗ ಭೂಮಿಯ ಜೊತೆಗೆ ದೇವಸ್ಥಾನ ಸ್ಥಾನಪತಿಗಳಿಂದ ಕ್ರಯಕ್ಕೆ ಕೊಂಡ ೮೦ ಕಂಭ ಭೂಮಿಯನ್ನು ದತ್ತಿ ನೀಡಿರುವ ವಿಚಾರವನ್ನು ಈ ಶಾಸನ ತಿಳಿಸುತ್ತದೆ. ಇದರ ಕಾಲ ಶಕವರ್ಷ ೧೧೭೪[ಕ್ರಿ ಶ ೧೨೫೦]. ಅದರಲ್ಲಿ ಬಂದ ವಾರ್ಷಿಕ ಆದಾಯವನ್ನು ಉದ್ಯಾನವನಕ್ಕೆ ನೀರು ಹಾಯಿಸುವ ಎತ್ತುಗಳಿಗೆ ಅವುಗಳನ್ನು ನೋಡಿಕೊಳ್ಳುವ

ಕೊಂಗವಾಡಿನ ಶ್ರೀಕರಣದ ರಾವಣ್ಣನ ಮಗನಾದ ಮುದುಕಯ್ಯನಿಗೆ ಕೊಡುವಂತೆ ಸೋಮಣ್ಣನ ಮಗನಾದ ನಾಗಣ್ಣ ವಿಜಯಣ್ಣ ಬರೆದ ಶಾಸನವಾಗಿದೆ.

ರಂಗಮಂಟಪದ ಹೊರಭಿತ್ತಿಯ ಬಳಿ ದಕ್ಷಿಣ ಕಡೆ ನೆಟ್ಟ ಕಲ್ಲುಶಾಸನದ ಮೊದಲ ಭಾಗದ ಸಾರಾಂಶ; ಶ್ರೀ ರಾಮನಾಥ ದೇವಸ್ಥಾನದ ಸ್ಥಾನಪತಿಗಳಾದ ಭೈಚಯ್ಯ, ಕನ್ನಯ್ಯ ಇವರ ಬಿನ್ನಹದ ಮೇಲೆ ಶ್ರೀರಂಗಪಟ್ಟಣವನ್ನಾಳುತ್ತಿದ್ದ ಚೆಂಗಾಳ್ವ ವಂಶದ ಮಹಾಮಂಡಳೇಶ್ವರ ಸೊಮದೇವರಸ ಮತ್ತು ಬೊಪ್ಪದೇವರಸರು ಹಳೆಯ ದತ್ತಿಯನ್ನು ನವೀಕರಿಸಿದರು.

ಹೊಯ್ಸಳರಾಯ ವೀರಸೋಮೇಶ್ವರ, ಸೋಮದೇವರಸ ಬೊಪ್ಪದೇವರಸರು ತಮ್ಮ ಕುಟುಂಬದೊಂದಿಗೆ ಬಂದು ಶ್ರೀರಾಮನಾಥ ದೇವರಿಗೆ ಧಾರಾಪೂರ್ವಕವಾಗಿ ಸಮರ್ಪಿಸಿ ಮಾವನೂರಿನಲ್ಲಿ ನಂದಿಕಂಬವನ್ನು ಪ್ರತಿಷ್ಠಾಪಿಸಿದರು. ಇದರ ಕಾಲ ಶಕ ವರ್ಷ ೧೧೭೪.[ಕ್ರಿ ಶ ೧೨೫೨]. ಗರ್ಭಗೃಹದ ಉತ್ತರಕಡೆ ಸೋಮಸೂತ್ರದ ಕಾಲದ ಸುಂಕದ ಅಧಿಕಾರಿಗಳಾದ ಹಂಪಣ್ಣ, ಗುಮ್ಮಣ್ಣ, ಬಸವಣ್ಣನವರು ಶ್ರೀರಾಮದೇವರಿಗೆ ನಂದಾದೀಪ ಮುಂತಾದವುಗಳನ್ನು ಉರಿಸಲು, ಆಡುದೆರೆ, ಪಾಲವಣ, ಮದುವೆ, ಮಗ್ಗದೆರೆ ಮುಂತಾದ ಸುಂಕದಿಂದ ಬಂದ ಹಣವನ್ನು ಉಪಯೋಗಿಸಿಕೊಳ್ಳುವುದೆಂದು ಕೊಟ್ಟ ಶಾಸನ. ಇದರ ಕಾಲ ಶಕವರ್ಷ ೧೧೯೬(ಕ್ರಿ. ಶ. ೧೨೬೦).

ದಕ್ಷಿಣಾಮೂರ್ತಿಯ ಹಿಂಭಾಗದಲ್ಲಿರುವ ನಾಲ್ಕನೇ ಕೆಳಭಾಗದಲ್ಲಿ ಮಹಾಪಸಾಯಿತ ಪೆಂಡಾರದೇವನ ಮಗ ನಿಂಗಣ್ಣನವರು ಮುಂಡಗೋಡು ಕೆರೆ ಬಳಿ ಎರಡು ಖಂಡುಗ ಭೂಮಿಯನ್ನು ರಾಮನಾಥದೇವರಿಗೆ ನೀಡಿರುವ ಉಂಬಳಿ. ಇದರ ಕಾಲ ಶಕವರ್ಷ ೧೨೦೦ (ಕ್ರಿ.ಶ. ೧೨೯೬).

ಪ್ರಕಾರದಲ್ಲಿ ಉತ್ತರದಿಕ್ಕಿನ ಹೊರಭಾಗದ ಗೋಡೆಯ ಮೇಲೆ ಶಕವರ್ಷ ೧೩೦೫ ನೆಯ ರುಧಿಕೋದ್ಗಾರಿ ಸಂವತ್ಸರದ ಕಾರ್ತಿಕ ಶುದ್ಧ ೧, ಸೋಮವಾರ ಸ್ವಾತಿನಕ್ಷತ್ರದಲ್ಲಿ (ಕ್ರಿ.ಶ. ೧೩೮೩ನೇ ಅಕ್ಟೋಬರ್ ೨೬) ವಿಜಯನಗರದ ರಾಜನಾದ ೨ನೇ ಹರಿಹರನ ಸೇವಕನಾದ ಕರಿಯವರಾಯಣ್ಣನು ರಾಮನಾಥಪುರ ಗ್ರಾಮವನ್ನು ಶ್ರೀರಾಮನಾಥ ಮತ್ತು ಶ್ರೀಗೋಪಿನಾಥ ದೇವರ ಪೂಜೆ ಮುಂತಾದ ಕಾರ್ಯಗಳಿಗೆ ದತ್ತಿಯಾಗಿ ಕೊಟ್ಟ ಅದರ ಸುಂಕಗಳಾದ ಆಡುದರೆ, ಮಗ್ಗದೆರೆ, ಆನೆದರೆ, ಕಮ್ಮರ, ಗಾಣಿಗರ, ನಾಯಿಂದರ ದಾರೆ ಸಲ್ಲುವಂತೆ ಶಾಸನಗಳಲ್ಲಿ ಬರೆದಿದೆ.

ಈ ರೀತಿಯಾಗಿ ದೇವಾಲಯದಲ್ಲಿ ನಾವು ಶಾಸನಗಳನ್ನು ನೋಡಬಹುದಾಗಿದ್ದು ಅಂದಿನ ಆಡಳಿತಗಾರರಿಗೆ ಆ ದೇವಸ್ಥಾನದ ಮೇಲೆ ಇದ್ದಂತಹ ಭಕ್ತಿ, ಅಭಿಮಾನ, ವೇದ್ಯವಾಗುತ್ತದೆ. ಆದರೆ ಈಗಿನ ಸರ್ಕಾರಕ್ಕೆ ಅಂತಹ ಅಭಿಮಾನವಿಲ್ಲದಿರುವುದು ದುರದೃಷ್ಟಕರ.

ಪ್ರಸನ್ನ ಶ್ರೀಸುಬ್ರಹ್ಮಣ್ಯಸ್ವಾಮಿಯವರ ಪೂಜಾಕೈಂಕರ್ಯಗಳು ಸರ್ವದಾ ನಡೆಯಲೆಂದು ಕ್ರಿ. ಶ. ೧೬೬೦ ರ ಜನವರಿ ೮ ನೇ ಭಾನುವಾರದಂದು ಹೊಳೆನರಸೀಪುರದ ನರಸಪ್ಪನಾಯಕನೆಂಬ ರಾಜ ಯಗಟಿ ಎಂಬ ಗ್ರಾಮವನ್ನು ಉಂಬಳಿಯಾಗಿ ಸಮರ್ಪಿಸಿರುವ ಭೂದಾನ ಧರ್ಮ ಶಾಸನ ಇಂತಿದೆ.

"ಶ್ರೀ ನರಸಿಂಹ"

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ<br>ತ್ರೈಲೋಕ್ಯನಗರಾಂಭ ಮೂಲಸ್ಥಂಭಾಯ ಶಂಭವೇ<br>ಹರೇರ್ಲಿಲಾವರಾಹಸ್ಯ ದಂಪ್ರಾದಂಡಸ ಪಾತುವಃ<br>ಉದೃತಾ ಮೇದಿನೀ ಯೇನ ಕಳುಂದಮಿವ ಯತ್ರಸಾ

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ವರ್ಷಗಳು ೧೫೮೦ನೆಯ ಸಂದವರ್ತಮಾನವಾದ ವಿಕಾರಿ ಸಂವತ್ಸರದ ಮಾಘ ಶುದ್ಧ ೭ ರಲ್ಲಿ ದೇವದೇವೋತ್ತಮ ದೇವತಾ ಸಾರ್ವಭೌಮ ಅಖಿಳಾಂಡಕೋಟಿ ಬ್ರಹ್ಮಾಂಡ ನಾಯಕ ರಾಮನಾಥಪುರಾಧೀಶ್ವರ ರಾಮನಾಥಪುರದ ಪ್ರಸನ್ನ ಸುಬ್ರಹ್ಮಣ್ಯೇಶ್ವರ ಸ್ವಾಮಿಯವಂ ದಿವ್ಯ ಶ್ರೀ ಪಾದ ಪದ್ಮಗಳಿಗೆ ಕಾಶ್ಯಪ ಗೋಪುರ ಆಪಸ್ತಂಭ ಸೂತ್ರ ಕೃಷ್ಣಪ್ಪನಾಯಕ ಪುತ್ರನಾದ ನರಸಿಂಹನಾಯಕನು ಕೊಟ್ಟ ಭೂದಾನ ಶಾಸನ ಕ್ರಮವೇನೆಂದರೆ:

ಶ್ರೀಮದ್ರಾಜಾದಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ ಶ್ರೀ ವೀರ ಕೃಷ್ಣದೇವರಾಯ ಮಾರಾಯರಯ್ಯನವರು ವಿದ್ಯಾನಗರದಲ್ಲಿ ರತ್ನಸಿಂಹಾಸನಾಧ್ಯಕ್ಷರಾಗಿ ಪೃಥ್ವಿ ಸಾಮ್ರಾಜ್ಯವಾಳುತ್ತಲು ನಮ್ಮಹಿರಿಯರಾದ ಕೃಷ್ಣಪ್ಪನಾಯಕರವರಿಗೆ ಆಚಂದ್ರಾರ್ಕವಾಗಿ ನಡೆವಂತೆ ಪಾಲಿಸ್ತ ಅಮರ

ಮಾಗಣಿನರಸಿಂಹಪುರದ ಸೀಮೆಗೆ ಸಲ್ಲುವ ಮರಲೂರ ಸ್ಥಳದ ಯಕ್ಕಟೆ ಎಂಬ ಗ್ರಾಮವನ್ನು ಈ ತಥಾತಿಥಿ ಪುಣ್ಯ ಕಾಲದಲ್ಲಿ ಸಹಿರಣ್ಯೋಗದ ದಾನ ಧಾರಾಪೂರ್ವಕವಾಗಿ ಶ್ರೀಸುಬ್ರಹ್ಮಣ್ಯಾರ್ಪಿತವಾಗಿ ಧಾರೆ ಮಾಡಿದ ಕಾರಣ ಆ ಗ್ರಾಮಕ್ಕೆ ಸಲ್ಲುವ ನಿಧಿ ನಿಕ್ಷೇಪ ಜಲಪಾಷಾಣ ದಕ್ಷಿಣಗಾಮಿಸಿದ್ದು ಸಾದ್ಯಂಗಳೆಂಬ ಅಷ್ಡ ಭೋಗತೇಜಸ್ಸಾಮ್ಯಂಗಳನ್ನು ದೆವತಾಸೇವಾ ನಿಮಿತ್ತವಾಗಿ ದಾನಾದಿ ವಿನಿಮಯ ವಿಕ್ರಯಕ್ಕೆ ಯೋಗ್ಯವಾಗಿ ನಡೆಯತಕ್ಕದೆಂದು ಶ್ರೀಸುಬ್ರಹ್ಮಣ್ಯೇಶ್ವರ ದಿವ್ಯಾ ಶ್ರೀಪಾದಪದ್ಮಂಗಳಿಗೆ ಕಾಶ್ಯಪ ಗೋತ್ರ ಆಪಸ್ತಂಭ ಸೂತ್ರದ ಕೃಷ್ಣಪ್ಪ ನಾಯಕರ ಪೌತ್ರನಾದ ಲಕ್ಕಪ್ಪನಾಯಕರ ಪುತ್ರನಾದ ನರಸಿಂಹನಾಯಕನು ಸಮರ್ಪಿಸಿದ ಶಾಸನ ಈ ಗ್ರಾಮಕ್ಕೆ ಚತುಃ ಸೀಮೆ ವಿವರ ಮಾಡಲು ಉದೂರು ದಕ್ಷಿಣ ಯಲಗಸಹಳ್ಳಿ ಪಶ್ಚಿಮ ಮರಲೂರು ಉತ್ತರ ಅಣ್ಣಂದಿರಾದ ರಂಗಪ್ಪನಾಯಕ ಹೊಸದಾಗಿ ರಂಗಪುರವೆಂದು ಗ್ರಾಮವ ಕಟ್ಟಿಸಿ ನರಸಿಂಹಪುರದ ನರಸಿಂಹ ಸ್ವಾಮಿಯವರಿಗೆ ಸಮರ್ಪಿಸಿದವರಾದ ಕಾರಣ ಆ ಗ್ರಾಮ ಹೊರತು ಭೂರಚಿ ಕಟ್ಟೇಭೂಮಿ ಸುಬ್ರಹ್ಮಣ್ಯಸ್ವಾಮಿಯವರ ದಿವ್ಯ ಶ್ರೀಪಾದಪದ್ಮಂಗಳಿಗೆ ಕಾಶ್ಯಪ ಪೌತ್ರನಾದ ಲಕ್ಷ್ಮಪ್ಪನಾಯಕರ ಪುತ್ರನಾದ ನರಸಿಂಹನಾಯಕನು ಸಮರ್ಪಿಸಿದ ಭೂದಾನ ಶಾಸನ.

ದಾನಪಾಲನಯೋಮಾದ್ಯೆ ದಾನಾಚಯೋನು ಪಾಲನಂ
ದಾನಾತ ಸ್ವರ್ಗಮವಾಪ್ನೋತಿಪಾಲನಾದ ಚ್ಯುತಂ ಪದಂ
ಏಕೈವ ಭಗಿನೀ ಲೋಕೇ ಸರ್ವೇಕಾಮೇದ ಭೂಭುಜಾಂ
ನ ಭೋಜ್ಯಾನ ಕರಗ್ರಹ್ಯಾವಿ ಪ್ರದತ್ರಾವ ಸುಂಧರಾ
ಷಷ್ಠಿ ವರ್ಷಸಹಪ್ರಾಣಿ ದಿಷ್ಟಾಯಾಂ ಜಾಯತೇ ಕೃಮಿಃ
ಸ್ವದತ್ತಾದ್ ದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ
ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್

' ಶ್ರೀ ಜಯ ನರಸಿಂಹ '

ಈ ರೀತಿ ಸುಬ್ರಹ್ಮಣ್ಯಸ್ವಾಮಿ ದೇವಾಲಯಕ್ಕೆ ನರಸಪ್ಪನಾಯಕ ಸಮರ್ಪಿಸಿದ ಶಾಸನವನ್ನು ಇದೇ ದೇವಾಲಯದಲ್ಲಿ ಉಯ್ಯಾಲೆ ಮಂಟಪದ ಹಿತ್ತಾಳೆ ಕಾಗದದ ಮೇಲೆ ನಾವು ಶಾಸನವನ್ನು

ಕಾಣಬಹುದಾಗಿದೆ. ಅಗಸ್ತ್ಯೇಶ್ವರ ದೇವಾಲಯದಿಂದ ಗೋಗರ್ಭಕ್ಕೆ ಹೋಗುವ ದಾರಿಯಲ್ಲಿ ನದಿಯಬಂಡೆಗಳ ಮೇಲೆ ಗ್ರಾಮಕ್ಕೆ ದಕ್ಷಿಣ ಹೊಳೆಯ ಆಚೆಯ ದಡದಲ್ಲಿರುವ ಲಕ್ಷ್ಮಣೇಶ್ವರ ದೇವಾಲಯ ನವರಂಗದ ಎಡಗಡೆ ಕೊಠಡಿಯಲ್ಲಿ ಬಿದ್ದಿರುವ ಪೀಠದ ಮೇಲೆಯೂ ನಾಮಶಾಸನಗಳನ್ನು ನೋಡಬಹುದು.

# ರಾಮನಾಥಪುರದ ಜಾತ್ರೆ ಮತ್ತು ಉತ್ಸವಗಳ ವೈಶಿಷ್ಟ್ಯ - ೬

ಆದಿಮಾನವರು ಬೇಟೆಯಾಡಿಕೊಂಡು ಬಂದು ಸಂತೋಷದಲ್ಲಿ ಎಲ್ಲರೂ ಸೇರಿ ಕುಣಿಯುತ್ತಾ ಹಾಡುತ್ತಿದ್ದಂತೆ ಗ್ರಾಮೀಣ ಜನರು ಸಮೃದ್ಧಬೆಲೆ ಬಂದ ಸಂತೋಷದಲ್ಲಿ ಊರವರನ್ನು ಸೇರಿಸಿ ಉತ್ಸವಗಳನ್ನು ಆಚರಿಸುತ್ತಿದ್ದರು. ಮೊದಮೊದಲು ಈ ಉತ್ಸವಗಳು ಅವರವರೂರಿಗೆ ಸೀಮಿತವಾಗಿರುತ್ತಿದ್ದವು. ಕೆಲವು ಊರಿನ ಸ್ಥಳೀಯ ಉತ್ಸವಗಳು ಕೆಲವೊಂದು ಆಕರ್ಷಕ ಕಥೆ ಪವಾಡ ಮಹತ್ತುಗಳಿಂದ ಲೋಕ ಉತ್ಸವಗಳಾಗಿ ಮಾರ್ಪಾಟಾಗುತ್ತಿದ್ದಂತೆ ಸುತ್ತಮುತ್ತೂರಿನ ಹತ್ತು ಹನ್ನೆರಡು ಗಾವುದ ದೂರದೂರಿನ ಜನ ಸಾಲು ಸಾಲಾಗಿ ಗುಂಪುಗುಂಪಾಗಿ ಯಾತ್ರೆಗೆ ಹೊರಟಂತೆ ಬರುತ್ತಿದ್ದಂತೆ ಹೀಗೆ ಕಾಶೀ ರಾಮೇಶ್ವರ ಬದರಿ ತೀರ್ಥಯಾತ್ರೆಗೆ ಹೋಗಿ ಬರುತ್ತಿದ್ದಂತೆ ಈ ಉತ್ಸವಗಳಿಗೂ ಯಾತ್ರೆ ಎಂದು ಕರೆಯತೊಡಗಿದರು. ಮುಂದೆ 'ಯಾತ್ರೆ' ಪದವೇ ಜನಭಾಷೆಯಲ್ಲಿ ಜಾತ್ರೆಯಾಗಿಬಿಟ್ಟದ್ದಕ್ಕೆ ಮೊದಲು ಕರೆಯುತ್ತಿದ್ದ ಉತ್ಸವಕ್ಕೆ ಜಾತ್ರೆ ಎಂಬಹೆಸರು ಬಂತು.

'ಯಾತ್ರಾ' ಎಂಬ ಸಂಸ್ಕೃತ ಶಬ್ದದಿಂದ ಬಂದಿರುವ 'ಜಾತ್ರೆ' ಯು ಒಂದು ಕ್ಷೇತ್ರದಲ್ಲಿ ಸಂಸ್ಕೃತಿಯನ್ನು ನಿರ್ಧರಿಸುವುದರ ಜೊತೆಗೆ ಒಂದು ಸೌಹಾರ್ದ ಮನೋಭಾವವನ್ನು ಬೆಳಸುವಲ್ಲಿ ಸಹಕಾರಿಯಾಗಿರುತ್ತದೆ. ಒಂದು ಕ್ಷೇತ್ರದ ಮೇಲೆ ಆರ್ಥಿಕವಾಗಿ, ಸಾಮಾಜಿಕವಾಗಿ ಧಾರ್ಮಿಕವಾಗಿ ಬಹಳ ಪ್ರಭಾವವನ್ನು ಈ ಜಾತ್ರೆಗಳು ಉಂಟುಮಾಡುತ್ತವೆ. ಅಂತೆಯೇ ರಾಮನಾಥಪುರದಲ್ಲಿ ನಡೆಯುವ ಜಾತ್ರೆಯು ಒಂದು ತಿಂಗಳ ಕಾಲ ನಡೆಯುತ್ತದೆ. ಇದಕ್ಕೆ ಮೊದಲು ನಡೆಯುವ ಜಾತ್ರೆಯೇ ದನಗಳ ಜಾತ್ರೆ ರಾಮನಾಥಪುರದ ದನಗಳ ಜಾತ್ರೆಯು ಸುಪ್ರಸಿದ್ಧ ದನಗಳ ಜಾತ್ರೆ ರಥೋತ್ಸವಕ್ಕೆ ಮುಂಚೆಯೇ ಮುಗಿಯುತ್ತದೆ.

೬೦ ವರ್ಷಗಳ ಹಿಂದೆ ಸುಮಾರು ೫, ೧೦, ಸಾವಿರ ಜೊತೆ ರಾಸುಗಳು ಜಾತ್ರೆಗೆ ಸೇರುತ್ತಿದ್ದವು ರಾಜ್ಯದ ಮೂಲೆ ಮೂಲೆಗಳಿಂದ ರೈತರು ಈ ಜಾತ್ರೆಗೆ ತಾವು ಸಾಕಿರುವ ಹೋರಿಗಳನ್ನು, ಎತ್ತುಗಳನ್ನು ಮಾರಾಟ ಮಾಡಲು ಉತ್ಸುಕರಾಗಿ ಇಲ್ಲಿ ಸೇರುತ್ತಿದ್ದರು. ಶಿರಧನಹಳ್ಳಿಯಿಂದ ರಾಮನಾಥಪುರವರೆಗೂ ಎರಡು ಕಡೆ ಜನಸಂದಣಿ ನೆರೆದಿರುತ್ತಿತ್ತು. ೬೦ ರ ದಶಕದಲ್ಲಿ ಇದ್ದಂತಹ ವೈಶಿಷ್ಟ್ಯ ಈಗ ಮಾಯವಾಗಿದೆ. ಹಿಂದೆ ಬೆಳಗಾಂ, ಬಳ್ಳಾರಿ, ಜಿಲ್ಲೆಯಿಂದ

ತಿಂಗಳುಗಟ್ಟಲೆ ಕಾಲು ನಡಿಗೆಯಲ್ಲಿ ನಡೆದುಕೊಂಡು ಬಂದು ಉತ್ತಮ ರಾಸುಗಳನ್ನು ಆಯ್ಕೆ ಮಾಡಿಕೊಂಡು ಬಹುಮಾನ ಕೊಟ್ಟು ಊರೆಲ್ಲಾ ಮೆರವಣಿಗೆ ಮಾಡುವ ಪದ್ಧತಿಯಿತ್ತು. ಈಗಲೂ ಇವೆಲ್ಲವನ್ನು ಅನುಸರಿಸುತ್ತರೆ. ಆದರೂ ಮೊದಲಿನಷ್ಟು ವಿಜೃಂಭಣೆ ಇಲ್ಲದಿರುವುದು ವಿಷಾದನೀಯ. ದನಕರುಗಳ ಸಗಣಿಯ ಟೆಂಡರ್ ನಿಂದಾಗಿ ಲಕ್ಷಾಂತರರೂಪಾಯಿ ಆದಾಯವಾಗುತ್ತಿತ್ತು ಅದೇ ಸಮಯದಲ್ಲಿ ವಸ್ತು ಪ್ರದರ್ಶನ ,ಮಾಡಿ ರೈತರು ಬೆಳೆದ ಬೆಳೆಗಳ ಪ್ರದರ್ಶನ ಮತ್ತು ಅವುಗಳಿಗೆ ಬಹುಮಾನವಿರುತ್ತಿತ್ತು. ಆದರೆ ಇಂದು ಅದ್ದೂರಿಯು ಮಾಯವಾಗಿದೆ ಆದರೂ ದನಗಳ ಜಾತ್ರೆ ಒಂದು ತಿಂಗಳ ಕಾಲ ಈಗಲೂ ನಡೆಯುವುದನ್ನು ಕಾಣಬಹುದಾಗಿದೆ. ದನಗಳ ಜೋಡಿಯನ್ನು ನೋಡುವುದೆ ಜನತೆಗೆ ಒಂದು ಸಂಭ್ರಮ.

ದನಗಳ ಜಾತ್ರೆಯು ಮುಗಿದ ನಂತರ ಸುಬ್ರಹ್ಮಣ್ಯಸ್ವಾಮಿ ರಥೋತ್ಸವ ರಾಮನಾಥಪುರದ ಜಾತ್ರೆ ಪ್ರಾರಂಭವಾಗುತ್ತದೆ. ಮಾರ್ಗಶಿರ ಶುದ್ಧ ಷಷ್ಟಿಯಂದು ರಥೋತ್ಸವ ಜರುಗುತ್ತದೆ ಸಾಮಾನ್ಯವಾಗಿ ಡಿಸೆಂಬರ್ ತಿಂಗಳಲ್ಲಿ ಈ ಜಾತ್ರೆ ನಡೆಯುವುದು. ಅಂದು ಶ್ರೀಪ್ರಸನ್ನಸುಬ್ರಹ್ಮಣ್ಯ ಸ್ವಾಮಿಯ ರಥೋತ್ಸವ ಷಷ್ಠಿ ಒಪ್ಪತ್ತು ಎಂದು ಎಲ್ಲರೂ ಹಬ್ಬದ ವಾತಾವರಣದಲ್ಲಿ ಮುಳುಗಿರುವ ದಿನ ಅಂದು ಸಾಮಾನ್ಯವಾಗಿ ಬೆಳಗ್ಗೆ ರಥೋತ್ಸವ ನಡೆಯುವುದು. ರಥವನ್ನು ವಿವಿಧ ಅಲಂಕಾರಗಳಿಂದ ವರ್ಣರಂಜಿತವಾಗಿ ಅಲಂಕರಿಸಿ ರಥದ ಮಧ್ಯದಲ್ಲಿ ಸುಬ್ರಹ್ಮಣ್ಯ ಸ್ವಾಮಿಯನ್ನು ಪ್ರತಿಷ್ಠಾಪಿಸಿರುವ ರಥೋತ್ಸವವನ್ನು ನೋಡಲು ಸಾವಿರಾರು ಯಾತ್ರಾರ್ಥಿಗಳು ರಥೋತ್ಸವದಲ್ಲಿ ಪಾಲ್ಗೊಂಡು ರಥವನ್ನು ಎಳೆದು ಧನ್ಯರಾಗುತ್ತಾರೆ. ವರ್ಗ,ವರ್ಣ ಭೇದವಿರುವುದಿಲ್ಲ. ರಥ ಎಳೆಯಲು ತಮಿಳುನಾಡಿನಿಂದ ಭಕ್ತರು ಬರುತ್ತಾರೆ. ಕುಕ್ಕೆ ಸುಬ್ರಹ್ಮಣ್ಯದಲ್ಲೂ ಅಂದೇ ರಥೋತ್ಸವ ಅಂದು ಗರುಡಪಕ್ಷಿಯು ಕುಕ್ಕೆಸುಬ್ರಹ್ಮಣ್ಯದಿಂದ ಬಂದು ರಥದ ಮೇಲೆ ಸುತ್ತು ಹಾಕಿದ ಮೇಲೆಯೆ ರಥ ಎಳೆಯುವುದು ಎಂಬ ಪ್ರತೀತಿ ಇಂದಿಗೂ ಇದೆ.

ನವ ದಂಪತಿಗಳು ತಪ್ಪದೆ ರಥೋತ್ಸವದಲ್ಲಿ ಭಾಗವಹಿಸುತ್ತಾರೆ. ಅವರು ಭಕ್ತಿ ಭಾವದಿಂದ ಪೂಜೆ ಸಲ್ಲಿಸಿ ಇಷ್ಟಾರ್ಥವನ್ನು ಪಡೆಯುತ್ತಾರೆ. ನವದಂಪತಿಗಳಾದಿಯಾಗಿ ಎಲ್ಲರೂ ಹಣ್ಣು ಜವನವನ್ನು ರಥದ ಕಳಶಕ್ಕೆ ಹೊಡೆಯಲು ಪ್ರಯತ್ನಿಸುವುದು ಒಂದು ಮನರಂಜನೆಯನ್ನು ಉಂಟುಮಾಡುವಂಥದ್ದು ರಥೋತ್ಸವದ ದಿನ ದೇವಸ್ಥಾನಗಳಲ್ಲಿ ವಿಶೇಷ ಪೂಜೆ ಜರುಗುತ್ತದೆ.

ವೇದ,ಪಠನ ಭಜನೆಗಳು ನಡೆಯುತ್ತವೆ. ಭಕ್ತರು ವಿಶೇಷವಾಗಿ ತಮಗೆ ಇಷ್ಟವಾದ ಪೂಜಾರ್ಚನೆಯನ್ನು ಮಾಡಿಸಿಕೊಂಡು ಹರಕೆಯನ್ನು ತೀರಿಸಿಕೊಂಡು ತೃಪ್ತಭಾವವನ್ನು ಹೊಂದುತ್ತಾರೆ.

ಅಂದು ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನದಲ್ಲಿ ಜನಸಂಖ್ಯೆ ಅಧಿಕವಾಗಿರುತ್ತದೆ. ದೇವಸ್ಥಾನದ ಸುತ್ತ ಸಾಲಾಗಿ ನಿಂತು ದೇವರ ದರ್ಶನ ಪಡೆಯುವುದನ್ನು ಕಾಣಬಹುದಾಗಿದೆ. ಆ ದೇವಾಲಯದಲ್ಲಿ ಹಣ್ಣು ತುಪ್ಪ ಎಂಬ ಸಿಹಿ ಮಾಡಿ ದೇವರಿಗೆ ನೈವೇದ್ಯ ಮಾಡುವ ರೂಢಿಯಿದೆ. ಜಾತ್ರೆಗೆ ಮತ ಭೇದವಿಲ್ಲದೇ ಎಲ್ಲಾಮತದ ಜನರು ಬರುತ್ತಾರೆ. ಹುಡುಗರ ದಂಡು ಗುಂಪು ಗುಂಪಾಗಿ ಬರುತ್ತಾರೆ. ಹಳ್ಳಿಯಿಂದ ಜನರು ಗಾಡಿ ಕಟ್ಟಿಕೊಂಡು ಕುಟುಂಬ ಪರಿವಾರ ಸಮೇತರಾಗಿ ಬಂದು ಹೋಗುತ್ತಾರೆ. ಚಿಕ್ಕಮಕ್ಕಳಿಗಂತು ರಾಮನಾಥಪುರ ಜಾತ್ರೆಗೆ ಬರುವುದೆಂದರೆ ಎಲ್ಲಿಲ್ಲದ ಖುಷಿಯಾಗುತ್ತದೆ. ಕೊಡಗಿನಿಂದ ವಾಹನಗಳಲ್ಲಿ ದಂಡು ದಂಡಾಗಿ ಜನರು ಬರುತ್ತಾರೆ. ರಾಮನಾಥಪುರದಲ್ಲಿ ಅಂದು ವಿಶೇಷ ಬಸ್ ವ್ಯವಸ್ಥೆ ಮಾಡಿರುತ್ತಾರೆ. ರಾಮನಾಥಪುರ ತೇರಿನ ದಿನ ಸುತ್ತಮುತ್ತಲ ಶಾಲಾಕಾಲೇಜುಗಳಿಗೆ ರಜೆಯನ್ನು ಘೋಷಿಸಿರುತ್ತಾರೆ.

ಭಕ್ತರ ಪೂಜಾಕಾರ್ಯಗಳು ಮುಗಿದ ನಂತರ ತಾವು ವಿಶೇಷವಾಗಿ ಮಾಡಿಕೊಂಡು ಬಂದಿರುವ ಬುತ್ತಿಯನ್ನು ಬಿಚ್ಚಿ ರಾಮೇಶ್ವರ ದೇವಸ್ಥಾನದ ಆವರಣದಲ್ಲಿ ಕುಳಿತು ಭೋಜನ ಮಾಡುತ್ತಾರೆ. ಆನಂತರ ವಹ್ನಿ ಪುಷ್ಕರಿಣಿಯಲ್ಲಿರುವ ಮೀನುಗಳನ್ನು ನೋಡುವ ಸಂಭ್ರಮ. ತಾವು ತಂದ ತಿಂಡಿ ತಿನಿಸುಗಳನ್ನು ಆ ಮೀನುಗಳಿಗೆ ಹಾಕಿ ಅವುಗಳೊಂದಿಗೆ ಚಿಕ್ಕಮಕ್ಕಳಾದಿಯಾಗಿ ಎಲ್ಲರೂ ಮೀನುಗಳ ದರ್ಶನ ಪಡೆಯುತ್ತಾರೆ. ಈ ಮೊದಲೇ ತಿಳಿಸಿರುವಂತೆ ದೇವತೆಗಳ ಅವತಾರವೆಂಬ ಪ್ರತೀತಿ ಇದೆ. ಶೃಂಗೇರಿಗಿಂತಲೂ ಭಾರಗಾತ್ರದ ಮೀನುಗಳು ಇಲ್ಲಿವೆ. ಎಷ್ಟೇ ಪ್ರವಾಹ ಬಂದರೂ ಈ ಮೀನುಗಳು ಆ ಜಾಗವನ್ನು ಬಿಟ್ಟು ಕದಲದೇ ಇರುವುದು ನಂಬಿಕೆಗೆ ಸಾಕ್ಷಿಯಾಗಿದೆ. ಜಾತ್ರೆಗೆ ಬಂದ ಭಕ್ತಾದಿಗಳೆಲ್ಲಾ ಈ ಮೀನುಗಳನ್ನು ನೋಡಿಕೊಂಡು ತಮಗೆ ಬೇಕಾದ ಸಾಮಾನುಗಳನ್ನು ಕೊಳ್ಳಲು ತಯಾರಾಗುತ್ತಾರೆ.

ಜಾತ್ರೆಯಲ್ಲಿ ರಸ್ತೆಯ ಎರಡು ಬದಿಯಲ್ಲೂ ವಿವಿಧ ಅಂಗಡಿಯ ಮಳಿಗೆಗಳನ್ನು ಕಾಣಬಹುದು. ಸುಬ್ರಹ್ಮಣ್ಯ ಸ್ವಾಮಿಯ ಬೀದಿಯಿಂದ ರಾಮೇಶ್ವರ ದೇವಾಲಯದ ಮುಂದಿನ

ಬೀದಿಯಲ್ಲಿ ಜನಜಂಗುಳಿಯಿಂದ ಕಂಗೊಳಿಸುತ್ತದೆ. ಸಿಹಿ ತಿನಿಸುಗಳ ಅಂಗಡಿಗಳು, ಪಾತ್ರೆ, ಚಪ್ಪಲಿಗಳ ಅಂಗಡಿಗಳು, ಹೆಣ್ಣುಮಕ್ಕಳ ಬಳೆ ಅಂಗಡಿ, ಮಕ್ಕಳ ಆಟದ ಸಾಮಾನಿನ ಅಂಗಡಿಗಳು ಹೆಚ್ಚಾಗಿ ಕಂಡುಬರುತ್ತವೆ.

ಭಕ್ತಾದಿಗಳು ವಿವಿಧ ಮಳಿಗೆಗಳಿಗೆ ಹೋಗಿ ತಮಗೆ ಬೇಕಾದ ಆಟದ ಸಾಮಾನುಗಳನ್ನು ಕೊಂಡು ಕೊಳ್ಳುತ್ತಾರೆ. ತಮ್ಮ ಮನೆಯ ದಿನ ನಿತ್ಯದ ಕೆಲವು ವಸ್ತುಗಳನ್ನು ತೆಗೆದುಕೊಂಡು ಅವರು ಹೊರಡಲು ಸಿದ್ಧರಾಗುತ್ತಾರೆ. ಜಾತ್ರೆಯಲ್ಲಿ ಸರ್ಕಸ್ ಮತ್ತು ಕೆಲವು ಮನರಂಜನೆಯ ಆಟಗಳು ನಡೆಯುತ್ತಿರುತ್ತವೆ. ಅಂತಹ ಆಟಗಳನ್ನು ನೋಡದೆ ಹೋದರೆ ಜಾತ್ರೆಗೆ ಬಂದುದರ ತೃಪ್ತಿಯೇ ಆಗುವುದಿಲ್ಲ. ಅಂತಹ ಆಟಗಳನ್ನು ಆಡಿಕೊಂಡು, ೧೦ ವರ್ಷಗಳ ಹಿಂದೆ ಸಿನಿಮಾ ಮಂದಿರವಿದ್ದು ಸಿನಿಮಾ ನೋಡಿಕೊಂಡೇ ಹೋಗುತ್ತಿದ್ದರು. ಆದರೆ ಇಂದು ಸಿನಿಮಾ ಇಲ್ಲದ ಕಾರಣದಿಂದ ಸರ್ಕಸ್ ನೋಡಿಕೊಂಡು ಸಂತೋಷದಿಂದ ಜಾತ್ರೆಯ ತಿಂಡಿ ಪುರಿಖಾರವನ್ನು ತೆಗೆದುಕೊಂಡು ತಮ್ಮ ತಮ್ಮ ಊರುಗಳಿಗೆ ಪ್ರಯಾಣ ಬೆಳೆಸುತ್ತಾರೆ. ರಾಮನಾಥಪುರ ಜಾತ್ರೆಯ ಇನ್ನೊಂದು ವೈಶಿಷ್ಟ್ಯವೆಂದರೆ ಷಷ್ಠಿ ಮತ್ತು ತಿಂಗಳ ಷಷ್ಠಿಯ ತೇರಿನ ದಿನ ದಾಸೋಹವನ್ನು ಏರ್ಪಡಿಸಿರುತ್ತಾರೆ. ಶ್ರೀ ವೈಷ್ಣವರು ಅಗಸ್ತ್ಯೇಶ್ವರ ದೇವಾಲಯದ ಹಿಂದಿರುವ ದಿವಾನ್ ಛತ್ರದಲ್ಲಿ ಈ ದಾಸೋಹವಿದ್ದರೆ ಸ್ಮಾರ್ಥ ಬ್ರಾಹ್ಮಣರು ಸುಬ್ರಹ್ಮಣ್ಯ ಸ್ವಾಮಿ ಛತ್ರದಲ್ಲಿಯು ಆರ್ಯವೈಶ್ಯರು ಕನ್ನಿಕಾಪರಮೇಶ್ವರಿ ಛತ್ರದಲ್ಲಿಯು ಮತ್ತೆ ಕೆಲವು ಕಡೆ ಎಲ್ಲಾ ವರ್ಗದವರಿಗೂ ಅನ್ನ ದಾಸೋಹವು ಏರ್ಪಾಡಾಗಿರುತ್ತದೆ. ಜಾತ್ರೆಯ ದಿನ ನಮಗೆ ಕಂಡು ಬರುವ ಇನ್ನೊಂದು ದೃಶ್ಯವೆಂದರೆ ಊರೊಳಗೆ ಕೆಲವು ಮನೆಯವರು ರಸ್ತೆಯಲ್ಲಿ ಹೋಗುವ ಭಕ್ತಾದಿಗಳಿಗೆ ಮಜ್ಜಿಗೆ, ನೀರನ್ನು ಕೊಟ್ಟು ಅವರ ದಾಹವನ್ನು ಹಿಂಗಿಸುವ ದೃಶ್ಯ ಸರ್ವೇ ಸಾಮಾನ್ಯ.

ರಾಮನಾಥಪುರ ಜಾತ್ರೆ ಇತ್ತೀಚೆಗೆ ತನ್ನ ವೈಭವವನ್ನು ಕಳೆದು ಕೊಳ್ಳುತ್ತಾ ಬರುತ್ತಿದೆ ವರ್ಷ ವರ್ಷಕ್ಕೆ ಜನಸಂಖ್ಯೆಯು ಇಳಿಮುಖವಾಗುತ್ತಿದೆ. ದನಗಳ ಜಾತ್ರೆಯಲ್ಲು ಅಷ್ಟೇ ದನಗಳ ಸಂಖ್ಯೆಯು ವರ್ಷದಿಂದ ವರ್ಷಕ್ಕೆ ಕಡಿಮೆಯಾತ್ತಿದೆ. ತಿಂಗಳು ಜಾತ್ರೆ ಮುಗಿದ ಮೇಲು –೧೫ ದಿವಸ ಅಂಗಡಿ ಮರಮಟ್ಟುಗಳು ಇರುತ್ತಿದ್ದವು ಅದರೆ ಆಗ ಒಂದು ತಿಂಗಳಿಗೆ ಮುಂಚೆಯೇ ಅಂಗಡಿಗಳು ಕಾಣದಾಗುತ್ತವೆ, ನಡೆಯುತ್ತಿದ್ದ ವಸ್ತು ಪ್ರದರ್ಶನ ಇಲ್ಲದಂತಾಗಿದೆ. ಹೀಗೆ ಕ್ರಮೇಣ

ರಾಮನಾಥಪುರ ಜಾತ್ರೆಯೊಂದಲ್ಲ ಎಲ್ಲಾ ಜಾತ್ರೆಗಳು ಸಹ ಮೊದಲಿದ್ದಷ್ಟು ಉತ್ಸಾಹ ಆಸಕ್ತಿಯಿಂದ ನಡೆಯುವುದು ಕಡಿಮೆಯಾಗುತ್ತಾ ಹೋಗುತ್ತಿವೆ.

**ಉತ್ಸವಗಳು:**

ಒಂದು ಕ್ಷೇತ್ರದಲ್ಲಿ ನಡೆಯುವ ಉತ್ಸವಗಳು ಆ ಕ್ಷೇತ್ರದ ಸಂಸ್ಕೃತಿಯ ಅಧ್ಯಯನದಲ್ಲಿ ಸಹಾಯಕಾರಿಯಾಗುತ್ತವೆ. ಉತ್ಸವಗಳು ಒಂದು ಕ್ಷೇತ್ರದ ಸಂಸ್ಕೃತಿಯನ್ನು ಬಿಂಬಿಸುವಂತವುಗಳಾಗಿವೆ. ಶ್ರೀ ಕ್ಷೇತ್ರ ರಾಮನಾಥಪುರದಲ್ಲಿಯು ಸಹ ಅಂತಹ ಉತ್ಸವಗಳು ಆಗುತ್ತಿರುತ್ತವೆ. ಅದರಲ್ಲಿ ಈ ಹಿಂದೆ ಸುಬ್ರಹ್ಮಣ್ಯಸ್ವಾಮಿಯ ರಥೋತ್ಸವವನ್ನು ನೋಡಿದ್ದೇವೆ. ಅದೇ ರೀತಿ ಶ್ರೀ ಲಕ್ಷ್ಮೀನರಸಿಂಹ ಸ್ವಾಮಿಯವರ ಕಲ್ಯಾಣೋತ್ಸವವು ವಿಜೃಂಭಣೆಯಿಂದ ನಡೆಯುತ್ತದೆ. ಶ್ರೀ ಸೋಮಾಶಿಯಾಂಡಿನ್ ಸೇವಾ ಟ್ರಸ್ಟ್ ವತಿಯಿಂದ ಸ್ವಸ್ತಶ್ರೀ ಶ್ರಾವಣ ಸಂವತ್ಸರ ಮಾಘಮಾಸ ಕೃಷ್ಣಪಕ್ಷ ತೃತಿಯ ಹಸ್ತ ನಕ್ಷತ್ರದಂದು ಈ ಉತ್ಸವ ಜರುಗುತ್ತದೆ. ಸಾಮಾನ್ಯವಾಗಿ ಫೆಬ್ರವರಿ ತಿಂಗಳ ಕಡೆಯ ವಾರದಲ್ಲಿ ಈ ಉತ್ಸವ ಬರುವುದು. ಈ ಉತ್ಸವದ ಹಿಂದಿನ ದಿನ ಬೆಳಿಗ್ಗೆ ೯ ಘಂಟೆಯ ಸಮಯದಲ್ಲಿ ವೇದ ಪುರಾಣ ಮತ್ತು ದಿವ್ಯ ಪ್ರಬಂಧ ಸೇವಾಕಾಲ ಪ್ರಾರಂಭವಾಗಿ ನವಕಲಶ ಸ್ಥಾಪನೆ ಮಾಡಿ ದೇವರಿಗೆ ಅಭಿಷೇಕ ಮಾಡಿ ಉತ್ಸವ ಮಂಗಳಾರತಿಯ ನಂತರ ತೀರ್ಥಪ್ರಸಾದ ವಿನಿಯೋಗವಿರುತ್ತದೆ. ಅದೇ ದಿನ ಸಾಯಂಕಾಲ ೮ ಘಂಟೆಗೆ ಗರುಡ ವಾಹನ ತಿರುವೀಧಿ ಉತ್ಸವ ಮಹಾಮಂಗಳಾರತಿ ನಡೆಯುತ್ತದೆ. ಮುಂದಿನ ದಿನ ಬೆಳ್ಳಿಗೆ ೮.೩೦ಕ್ಕೆ ವೇದ ಪಾರಾಯಣ ಮತ್ತು ದಿವ್ಯ ಪ್ರಬಂಧ ಸೇವಾಕಾಲ ಶಾಂತಿ ಹೋಮ ನಡೆದು ಕಲ್ಯಾಣೋತ್ಸವ ಜರುಗುತ್ತದೆ. ಈ ದಿವಸ ಪರಸ್ಥಳದಿಂದ ಬಂದ ಭಕ್ತಾದಿಗಳಿಗೆ ಭೋಜನ ವ್ಯವಸ್ಥೆ ಇರುತ್ತದೆ. ಈ ಉತ್ಸವ ವಿಜೃಂಭಣೆಯಿಂದ ಕೊಡಿರುತ್ತದೆ. ಬಂಧು-ಬಾಂಧವರು ಆಪ್ತರು ಈ ಊರಿಗೆ ಬಂದಿರುತ್ತಾರೆ.

**ಶ್ರೀ ಪಟ್ಟಾಭಿರಾಮ ಸ್ವಾಮಿಯವರ ಬ್ರಹ್ಮರಥೋತ್ಸವ :**

ಶ್ರೀ ಚಾರಣ ನಾಮ ಸಂವತ್ಸರದ ಚೈತ್ರ ಶುದ್ಧ ತ್ರಯೋದಶಿಯಂದು ಶ್ರೀ ಕ್ಷೇತ್ರದಲ್ಲಿ ಲೋಕಪಾವನಿಯಾದ ಕಾವೇರಿ ನದಿಯ ಉತ್ತರ ತೀರದಲ್ಲಿ ಶ್ರೀ ಕ್ಷೇತ್ರದಲ್ಲಿ ಲೋಕಪಾವನಿಯಾದ

ಕಾವೇರಿ ನದಿಯ ಉತ್ತರ ತೀರದಲ್ಲಿ ಶ್ರೀ ಸೌಭರಿ ಮಹರ್ಷಿಗಳಿಂದ ಪ್ರತಿಷ್ಠಿತರಾದ ಅಪೂರ್ವ ರೂಪಿಯಾಗಿ ವಿರಾಜಿಸುತ್ತಿರುವ ಶ್ರೀ ಪಟ್ಟಾಭಿರಾಮಸ್ವಾಮಿಯವರಿಗೆ ಅನಾದಿ ಕಾಲದಿಂದಲೂ ಘನ ಸರ್ಕಾರದೊಡನೆ ಶ್ರೀ ವೈಖಾನಸ ಅನಮೊಕ್ತರೀತ್ಯಾನವಾಹ ಪೂರ್ವಕವಾಗಿ ರಥೋತ್ಸವವು ನೆರವೇರಿಸಲ್ಪಡುತ್ತದೆ.

ಹತ್ತು ದಿನಗಳ ಕಾಲ ನಡೆಯುವ ಈ ಉತ್ಸವ ತುಂಬಾ ವಿಜೃಂಭಣೆಯಿಂದ ಕೂಡಿರುತ್ತದೆ. ಮೊದಲನೇ ದಿನ ಪಂಚಾಮೃತ ಅಭಿಷೇಕ ಮಂಗಳಾರತಿ ಅದೇ ದಿನ ರಾತ್ರಿ ದೇವತಾ ಪ್ರಾರ್ಥನೆ ಮೃತ್ತಿಕಾ ಸಂಗ್ರಹಣೆ, ನಿತ್ಯಾರಾಧನೆ, ಅಂಕುರಾರ್ಪಣೆ, ಮಹಾಮಂಗಳಾರತಿ, ಪ್ರಸಾದ ವಿನಿಯೋಗ ಕಾರ್ಯಕ್ರಮ ಮುಂದಿನ ದಿನ ಬೆಳಿಗ್ಗೆ ಯಾಗಶಾಲಾ ಪ್ರವೇಶ ಮಾಡಿ ಅಗ್ನಿಪ್ರಣಯನ, ವಾಸ್ತು ಹೋಮ ಕಳಸ ಸ್ಥಾಪನೆ ಆಚಾರ್ಯಾದಿ ಋತ್ವಿಗ್ವರಣ ಕಾರ್ಯಕ್ರಮ ರಾತ್ರಿ ರಕ್ಷಾ ಬಂಧನ, ಧ್ವಜ ಪ್ರತಿಷ್ಠೆ ಭೇರಿತಾಡನ, ದೇವತಾ ಆಹ್ವಾನ, ಬಲಿಪ್ರದಾನ, ಧ್ವಜಾರೋಹಣ, ಪ್ರಸಾದವಿನಿಯೋಗವಿರುತ್ತದೆ. ಮೂರನೇ ದಿನ ರಾತ್ರಿ ಶೇಷವಾಹನೋತ್ಸವ, ಆರನೇ ದಿನ ಪ್ರಹ್ಲಾದ ಪರಿಪಾಲನೋತ್ಸವ, ಏಳನೇ ದಿನ ಉಂಜಲೋತ್ಸವ, ಗರುಡೋತ್ಸವ, ಗಜವಾಹನೋತ್ಸವ, ಎಂಟನೇ ದಿನ ಬೆಳಿಗ್ಗೆ ಸೂರ್ಯಮಂಡಲೋತ್ಸವ, ಶ್ರೀ ಕೃಷ್ಣ ಗಂಧೋತ್ಸವ, ಯತ್ರಾಧಾನಪೂರ್ವಕ ಮಂಟಪೋತ್ಸವ ಅದೇ ದಿನ ಮಧ್ಯಾಹ್ನ ಬ್ರಹ್ಮರಥೋತ್ಸವ ರಾತ್ರಿ ಪುಷ್ಪಾಂದಾಳಿತೋತ್ಸವ ಒಂಭತ್ತನೇ ದಿನ ಬೆಳಗ್ಗೆ ಸಾಲಿಗ್ರಾಮ ತೀರ್ಥೋತ್ಸವ ರಾಮಾನುಜ ದಿವ್ಯಸಂದೇಶ ಮತ್ತು ಅಭಿಷೇಕವಿರುತ್ತದೆ.

ಈ ತೀರ್ಥೋತ್ಸವದಂದು ಇಲ್ಲಿಗೆ ಸಮೀಪವಿರುವ ಸಾಲಿಗ್ರಾಮದಿಂದ ರಾಮಾನುಜರು ಸ್ನಾನ ಮಾಡಿದ ಕೊಳದಿಂದ ತೀರ್ಥವನ್ನು ತಂದು ಸ್ವಾಮಿಗೆ ಅಭಿಷೇಕ ಮಾಡಲಾಗುವುದು. ಸಾಲಿಗ್ರಾಮದಿಂದ ಕಾಲುನಡಿಗೆಯಲ್ಲಿ ಬರಲಾಗುತ್ತದೆ ನಂತರ ಆ ತೀರ್ಥವನ್ನು ಭಕ್ತಾದಿಗಳಿಗೆ ನೀಡುತ್ತಾರೆ. ಅದೇ ದಿನ ರಾತ್ರಿ ರಾಸ ಕ್ರೀಡೋತ್ಸವ ಮಾಡಿ ರಾಮಾನುಜಾಚಾರ್ಯರ ತಿರುನಕ್ಷತ್ರ ಮತ್ತು ಸ್ತೋತ್ರ ಪಟಿಸುತ್ತಾರೆ. ಹತ್ತನೇ ದಿನ ಬೆಳಿಗ್ಗೆ ದಿವ್ಯಶಯನೋತ್ಸವ ಅಶ್ವವಾಹನೋತ್ಸವ, ಸೀತಾಪ್ರಣಯ, ಕಲಹ ಸಂಧಾನ, ಮಧ್ಯಾಹ್ನ ಅವಭೃತೋತ್ಸವ ಕಾರ್ಯಕ್ರಮ ಜರುಗುತ್ತದೆ. ಇವಿಷ್ಟೇ ಅಲ್ಲದೆ ವರ್ಷಪೂರ್ತಿ ಹಲವಾರು ಉತ್ಸವಗಳು ಪಟ್ಟಾಭಿರಾಮನಿಗೆ ನಡೆಯುತ್ತಲೇ ಇರುತ್ತವೆ.

# ಉಪಸಂಹಾರ

ಮಾನವನ ಮೇಲೆ ಪ್ರಕೃತಿ ಪ್ರಭಾವ ಬೀರಿದಷ್ಟೇ ಅವನ ಬದುಕಿನಲ್ಲಿ ಸಂಸ್ಕೃತಿ ಗಾಢವಾದ ಪ್ರಭಾವವನ್ನು ಬೀರುವುದರಲ್ಲಿ ಯಾವುದೇ ಅನುಮಾನವಿಲ್ಲ. ಮಾನವ ಮತ್ತು ಸಂಸ್ಕೃತಿ ಇವೆರಡು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ ಒಂದಕ್ಕೊಂದು ಪರಸ್ಪರ ಅವಿನಾಭಾವವಾಗಿ ಬೆರೆತು ಹೋಗಿವೆ. ಮಾನವನ ಬದುಕಿನ ಲಕ್ಷಾಂತರ ವರ್ಷಗಳ ಅವಧಿಯಲ್ಲಿ ಸಂಸ್ಕೃತಿ ವಿಕಸಿಸುತ್ತಾ ಬಂದಿದೆ. ಹಾಗೆಯೇ ಸಂಸ್ಕೃತಿಯ ಸ್ವರೂಪವು ಬದಲಾಗುತ್ತಾ ಬಂದಿದೆ. ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕ ಕಾರಣಗಳು ಸಾಂಸ್ಕೃತಿಕ ಅಂಶಗಳನ್ನು ನಿರಂತರ ಪರಿಷ್ಕರಣೆಗೆ ಗುರಿ ಮಾಡಿದೆ. ಯಾವುದೇ ಪ್ರಬಲವಾದ ಒತ್ತಡಕ್ಕೆ ಸಂಸ್ಕೃತಿ ಏಕಾಏಕಿ ಒಳಪಡುವುದಿಲ್ಲ. ಹಾಗು ಸಂಪೂರ್ಣವಾಗಿ ಬದಲಾಗುವುದಿಲ್ಲ. ಅನ್ಯ ಪ್ರಭಾವಗಳನ್ನು ತನ್ನ ಆಂತರೀಕ ಪರಿಸ್ಥಿತಿಗೆ ಅನುಗುಣವಾಗಿ ತನ್ನೊಳಗೆ ಸೇರಿಸಿಕೊಂಡು ತನ್ನದನ್ನಾಗಿ ಮಾಡಿಕೊಳ್ಳುತ್ತದೆ. ಹಾಗೆ ನೋಡಿದರೆ ಮಾನವ ಸಂಸ್ಕೃತಿ ಹುಟ್ಟಿಕೊಂಡಿದ್ದೇ ಈ ನೈಸರ್ಗಿಕ ಪ್ರಭಾವಗಳಿಂದ ಎನ್ನಬಹುದು. ಮಾನವನ ನಾಗರಿಕತೆ ಕೂಡ ನಿಸರ್ಗದ ಮಡಿಲಿನಲ್ಲಿಯೇ ಆರಂಭವಾಯಿತು. ಈ ಸ್ಥಳಗಳಲ್ಲೇ ಸಂಸ್ಕೃತಿಯ ತೊಟ್ಟಿಲುಗಳು ಕಾಣಿಸಿಕೊಂಡವು.

ಈ ಪ್ರಬಂಧದಲ್ಲಿ ರಾಮನಾಥಪುರದ ವಿವಿಧ ಮುಖಗಳನ್ನು ದರ್ಶಿಸುವ ಪ್ರಯತ್ನ ಮಾಡಲಾಗಿದೆ. ಇಲ್ಲಿ ಸಾಮಾಜಿಕ ಪರಿಚಯದಲ್ಲಿ ಸಂಸ್ಕೃತಿಯ ಬಿಂಬ ಅಧಿಕವಾಗಿ ಕಂಡುಬರುತ್ತದೆ. ಕೆಲವು ಹಬ್ಬಗಳನ್ನು ಶ್ರೀ ವೈಷ್ಣವರು ಮಾಡುವುದಿಲ್ಲ. ಇನ್ನು ಕೆಲವು ಹಬ್ಬಗಳನ್ನು ಅವರು ಅದ್ದೂರಿಯಾಗಿ ಆಚರಿಸುತ್ತಾರೆ. ಇತರರು ಆಚರಿಸಿದರು ಅವರಷ್ಟು ಅದ್ದೂರಿ ಕಂಡುಬರುವುದಿಲ್ಲ. ವಿವಾಹ ಪದ್ಧತಿಯಲ್ಲಿ, ಜನನದ ವಿಧಿ ಸಂಸ್ಕಾರದಲ್ಲಿ, ಮರಣದ ಸಂದರ್ಭದಲ್ಲಿ ಆಚರಿಸುವ ಪದ್ಧತಿಗಳು ಜನಾಂಗದಿಂದ ಜನಾಂಗಕ್ಕೆ ಭಿನ್ನವಾಗಿರುತ್ತವೆ. ಬ್ರಾಹ್ಮಣರಲ್ಲಿ ಮೂರು ದಿವಸ ವಿವಾಹ ಪದ್ಧತಿಯಿದ್ದರೆ ಇತರೆ ಜನಾಂಗದಲ್ಲಿ ಮೂರು ದಿವಸವಿದ್ದರೂ ಸ್ವರೂಪ ಬೇರೆಯೇ ಆಗಿರುತ್ತದೆ. ಬ್ರಾಹ್ಮಣರಲ್ಲಿ ವರದಕ್ಷಿಣೆಯಿಲ್ಲದಿರುವುದು ವಿಶೇಷ. ಇಂತಹ ಹಲವಾರು ವಿಷಯಗಳು ಸಂಸ್ಕೃತಿಯನ್ನು ಬಿಂಬಿಸುವಂತವುಗಳಾಗಿವೆ.

ದೇವಾಲಯಗಳ ಸ್ಥಾಪನೆ ನಾಡಿನ ಸಾಂಸ್ಕೃತಿಕ ಬೆಳವಣಿಗೆಗೆ ಭದ್ರವಾದ ಬುನಾದಿಯನ್ನು ಒದಗಿಸುವುದಲ್ಲದೆ ಜನರ ನೈತಿಕ ಮಟ್ಟವನ್ನು ಹೆಚ್ಚಿಸಿ ಧಾರ್ಮಿಕ ಮನೋಭಾವವನ್ನು ಸಮೃದ್ಧಿಗೊಳಿಸುವಲ್ಲಿ ಸಹಕಾರಿಯಾಗಿದೆ. ಜನರ ಧಾರ್ಮಿಕ ಚಟುವಟಿಕೆಗಳನ್ನು ಅತ್ಯಂತ ಪ್ರಬಲವಾಗಿ ನಿರೂಪಿಸುವಂತಹ ಮಾಧ್ಯಮವೆಂದರೆ ದೇವಾಲಯಗಳು. ಈ ದೇವಾಲಯಗಳು ಚರಿತ್ರೆಯ ವಿವಿಧ ಕಾಲಗಳಲ್ಲಿ ದೇಶದ ಬೇರೆ-ಬೇರೆ ಭಾಗಗಳಲ್ಲಿ ಪ್ರಚಲಿತದಲ್ಲಿದ್ದ ಧರ್ಮದ ವಿವಿಧ ಕಾರ್ಯಗಳನ್ನು ಪ್ರತಿಬಿಂಬಿಸುವುದಲ್ಲದೆ ಜನರ ಅಭಿರುಚಿ ಧರ್ಮದಲ್ಲಿನ ನಿಷ್ಠೆ, ಸಾಮಾಜಿಕ, ಸಂಪ್ರದಾಯ, ನಂಬಿಕೆ, ಇತ್ಯಾದಿ ಅನೇಕ ಸಮಕಾಲೀನ ವಿಷಯಗಳನ್ನು ತಿಳಿಸುವ ಆಗರ ಎನ್ನಬಹುದು. ರಾಮನಾಥಪುರದಲ್ಲಿ ಹೆಜ್ಜೆ ಹೆಜ್ಜೆಗು ದೇವಾಲಯಗಳನ್ನು ಕಾಣಬಹುದಾಗಿದೆ. ದಕ್ಷಿಣಗಂಗೆ ಎನಿಸಿದ ಕಾವೇರಿ ಹರಿಯುವ ತಾಣವಿದು. ದೇವಾಲಯಗಳ ಮೇಲ್ವಿಚಾರಣೆಯಿಲ್ಲದೆ ಅಲ್ಲಿನ ದೇವಾಲಯಗಳು ದುಸ್ಥಿತಿಗೆ ತಲುಪಿರುವುದು ವಿಷಾದನೀಯ ಸಂಗತಿ. ರಾಮೇಶ್ವರ, ಅಗಸ್ತ್ಯೇಶ್ವರ ದೇವಾಲಯಗಳು ಮುಜರಾಯಿ ಇಲಾಖೆಗೆ ಸೇರಿದ್ದು. ಇಲಾಖೆ ಇಲ್ಲಿ ಗಮನಹರಿಸದೆ ಇರುವುದು ಈ ದೇವಾಲಯಗಳ ದುಃಸ್ಥಿತಿಗೆ ಕಾರಣ.

ಪಟ್ಟಾಭಿರಾಮ ದೇವಾಲಯಕ್ಕೆ ಗೋಪುರವನ್ನು ಕಟ್ಟುತ್ತಿದ್ದು ಅದಕ್ಕೆ ಸುಮಾರು ೧೪ ರಿಂದ ೧೫ ಲಕ್ಷ ಖರ್ಚಾಗುವುದು. ಅದನ್ನು ಭಕ್ತಾದಿಗಳೆ ದಾನಮಾಡಿರುವುದು ಅಲ್ಲಿನ ಜನರ ಭಕ್ತಿಯನ್ನು ಪ್ರತಿಬಿಂಬಿಸುತ್ತದೆ. ಸರ್ಕಾರಕ್ಕೆ ಹಣ ಮಂಜೂರಾತಿಗೆಂದು ಅರ್ಜಿಸಲ್ಲಿಸಿದ್ದರೂ ಅವರು ಯಾವುದೇ ಕ್ರಮ ಕೈಗೊಳ್ಳದೆ ಇರುವುದು ಸರ್ಕಾರದ ನಿರ್ಲಕ್ಷ್ಯಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಆದ್ದರಿಂದ ಇಲ್ಲಿನ ಜನಪ್ರತಿನಿಧಿಗಳು ಶ್ರೀಕ್ಷೇತ್ರದ ಅಭಿವೃದ್ಧಿಪರ ಕಾಳಜಿ ವಹಿಸಬೇಕೆಂಬುದು ಎಲ್ಲರ ಅಭಿಪ್ರಾಯ.

ಜಾತ್ರೆ ಇಲ್ಲಿ ೨೦-೩೦ ವರ್ಷಗಳ ಹಿಂದೆ ಅದ್ದೂರಿಯಾಗಿ ನಡೆಯುತ್ತಿತ್ತು. ಆದರೆ ಈಗ ಅದರ ವೈಭವ ಮಾಯವಾಗಿದೆ. ಸಾಂಪ್ರದಾಯಕವಾಗಿ ನಡೆದುಕೊಂಡು ಬರುತ್ತಿರುವುದು ಮನಸ್ಸಿಗೆ ನೋವುಂಟು ಮಾಡುತ್ತದೆ. ಜೀವನಕ್ಕೆ ಮುದಕೊಡುವ ಸಂಗೀತ ಕಲೆಯ ಸೆಲೆಬತ್ತದೆ ಜೀವಂತವಾಗಿರಿಸುವ ಸಲುವಾಗಿ ಸಂಗೀತಾರಾಧನೆ ನಿರಂತರವಾಗಿ ಸಂಗೀತೋತ್ಸವ, ಸಂಗೀತ ಸಮ್ಮೇಳನಗಳು ನಡೆಯುವುದು ಆಶಾದಾಕವಾದುದೆನ್ನಬಹುದು. ಕಾವೇರಿ ನದಿಯಲ್ಲಿರುವ

ಒಂದೊಂದು ಶಿಲೆಯು ಪುರಾಣವನ್ನು ಸಾರಿ ಹೇಳುವಂತಹವು. ಅದರ ಜವಬ್ದಾರಿಯುತ ನಿರ್ವಹಣೆಯಿಲ್ಲದೆ ಆ ಶಿಲೆಗಳ ಮೇಲೆ ಮಲಮೂತ್ರ ವಿಸರ್ಜಿಸುತ್ತಿರುವುದು ಶೋಚನೀಯ ಸಂಗತಿ.

ಕ್ಷೇತ್ರಕಾರ್ಯದ ಅಧ್ಯಯನದಿಂದ ಇಲ್ಲಿ ಬದುಕುತ್ತಿರುವ ಜನಪದರ ಜೀವನ ರೀತಿ ನೀತಿಗಳನ್ನು ಅರ್ಥಮಾಡಿಕೊಳ್ಳುವ ಜೊತೆಗೆ ಆ ಸಮಾಜಕ್ಕೆ ಸಂಬಂಧಿಸಿದ ಸಂಸ್ಕೃತಿಯನ್ನು ಅದರ ಅನನ್ಯತೆಯನ್ನು ಮತ್ತು ಬದಲಾಗುತ್ತಿರುವ ಪರಿಸರಕ್ಕೆ ಹೇಗೆ ಸ್ಪಂದಿಸುತ್ತಿದೆ ಎಂಬುದನ್ನು ತಿಳಿದುಕೊಳ್ಳಲು ಸಾಧ್ಯವಾಗಿದೆ. ರಾಮನಾಥಪುರ ಆಧುನಿಕತೆಯ ಸ್ಪರ್ಶಪಡೆದು ಶಾಲೆ, ಕಾಲೇಜು, ಸರ್ಕಾರಿ ಆಡಳಿತ ಕಛೇರಿಗಳು, ಆಸ್ಪತ್ರೆ, ಸಂಘ ಸಂಸ್ಥೆಗಳು, ಸಾಂಸ್ಕೃತಿಕ ಬದುಕಿಗೆ ಆಧುನಿಕತೆಯ ಆಯಾಮವನ್ನು ಕಲ್ಪಿಸಿವೆ. ಒಟ್ಟಿನಲ್ಲಿ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರಾಮನಾಥಪುರ ಎಂಬ ಈ ಅಧ್ಯಯನ ವಿಶಾಲವಾದ ಮಾನವ ಬದುಕಿನ ಬಗೆಗಿನ ಜ್ಞಾನವನ್ನು, ವಿವಿಧ ಮಜಲುಗಳನ್ನು ಅರಿಯುವಲ್ಲಿ ನೆರವಾದರೆ ನನ್ನೀ ಪ್ರಯತ್ನ ಸಾರ್ಥಕವೆಂದೇ ಭಾವಿಸುತ್ತೇನೆ.

ಒಟ್ಟಾರೆಯಾಗಿ ಜನಸಮಾಜದ ಬದುಕಿನ ಕ್ರಮ ಸಾಮಾಜಿಕ ಬದುಕನ್ನು ನಿಯಂತ್ರಿಸುವ, ವ್ಯವಸ್ಥೆಗೊಳಿಸುವ, ಧಾರ್ಮಿಕ, ಆಚರಣಾತ್ಮಕ ಸಂಗತಿಗಳನ್ನು ಈ ಅಧ್ಯಯನದಲ್ಲಿ ಪ್ರಧಾನ ವಿವೇಚನೆಗೆ ಒಳಪಡಿಸುವ ಪ್ರಯತ್ನ ಮಾಡಲಾಗಿದೆ. ವರ್ತಮಾನದ ಸಾಂಸ್ಕೃತಿಕ ಬದುಕು ಏಕಕಾಲಕ್ಕೆ ಭವಿಷ್ಯ ಬದುಕಿನ ಯೋಜನೆಗಳನ್ನು ಗತಕಾಲದ ಸಾಮಾಜಿಕ ನಂಬಿಕೆ ವಿಚಾರಗಳನ್ನು ಒಳಗೊಳ್ಳುತ್ತದೆ. ಹಾಗಾಗಿ ವರ್ತಮಾನದ ಪ್ರಜಾಪ್ರಭುತ್ವದ ಸಾಮಾಜಿಕ ವ್ಯವಸ್ಥೆಯೊಳಗೆ ಧಾರ್ಮಿಕ ಶ್ರದ್ಧೆ, ನಂಬಿಕೆಗಳು ಇಂದಿಗೂ ಜೀವಂತ ಪರಂಪರೆಯಾಗಿ ಮುಂದುವರೆಯುತ್ತಿರುವುದನ್ನು ಈ ಅಧ್ಯಯನದ ಮೂಲಕ ಅರಿತುಕೊಳ್ಳಲಾಗಿದೆ. ಧರ್ಮನಿರಪೇಕ್ಷಯುಗದ ಆಶಯಗಳಿಗನುಗುಣವಾಗಿ ರಾಜಪ್ರಭುತ್ವದ ಕಾಲದಲ್ಲಿ ನೆಲೆಗೊಂಡ ದೇವಾಲಯ ಕೇಂದ್ರಿತ ಸಂಸ್ಕೃತಿ ಮಾರ್ಪಾಡನ್ನು ಹೊಂದಿರುವುದನ್ನು ನನ್ನ ಅಧ್ಯಾಯದಲ್ಲಿ ಗಮನಿಸಿ, ದೇಗುಲ ಕೇಂದ್ರಿತ ಜಾತ್ರೆ, ಹರಕೆ, ಹಬ್ಬ, ಪೂಜಾವಿಧಿ, ಆಚರಣೆಗಳು, ಜಾತಿಪದ್ಧತಿ ಎಲ್ಲಾ ವಿವರಗಳನ್ನೂ ಸೂಕ್ಷ್ಮವಾಗಿ ಗಮನಿಸಿ ಸಂಕ್ಷಿಪ್ತವಾಗಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

# ವಕ್ತೃ ವಿವರ

| ಹೆಸರು | ಜಾತಿ | ವಯಸ್ಸು | ವಿದ್ಯಾಭ್ಯಾಸ | ಉದ್ಯೋಗ | ಸ್ಥಳ |
|---|---|---|---|---|---|
| ತಿರುಮಲಾಚಾರ್ | ಬ್ರಾಹ್ಮಣ | ೬೦ | ಎಂ.ಎ | ನಿವೃತ್ತ ಉಪನ್ಯಾಸಕರು | ರಾಮನಾಥಪುರ |
| ನರಸಿಂಹಮೂರ್ತಿ | ಬ್ರಾಹ್ಮಣ | ೫೩ | ಬಿ.ಎ. | ವ್ಯವಹಾರ | ರಾಮನಾಥಪುರ |
| ದೇವಕಿ ಚಂದ್ರಶೇಖರ್ | ಬ್ರಾಹ್ಮಣ | ೩೮ | ಬಿ.ಎ. | ಶಿಕ್ಷಕರು | ರಾಮನಾಥಪುರ |
| ಲಕ್ಷ್ಮೀನಾರಾಯಣ | ಬ್ರಾಹ್ಮಣ | ೬೮ | ಎಸ್.ಎಸ್.ಎಲ್.ಸಿ | ಅರ್ಚಕರು | ರಾಮನಾಥಪುರ |
| ಶಿವಾನಂದಸ್ವಾಮಿ | ಬ್ರಾಹ್ಮಣ | ೪೦ | ಪಿ.ಯು.ಸಿ | ಅರ್ಚಕರು | ರಾಮನಾಥಪುರ |
| ಪಿ.ಸ್ವಾಮಿಗೌಡ | ಒಕ್ಕಲಿಗ | ೪೧ | ಎಂಎ.ಎಂಫಿಲ್ | ಶಿಕ್ಷಣ ಸಂಯೋಜನಾಧಿಕಾರಿ | ರಾಮನಾಥಪುರ |
| ಗಣೇಶಾಚಾರ್ | ವಿಶ್ವಕರ್ಮ | ೮೫ | ೪ನೇ ತರಗತಿ | ಶಿಲ್ಪಿ | ತಮಿಳುನಾಡು |
| ಸಂಜೀವ್‌ಗೌಡ | ಒಕ್ಕಲಿಗ | ೪೮ | ೮ನೇ ತರಗತಿ | ವ್ಯವಸಾಯ | ಗಂಗೂರು |
| ಆರ್.ಆರ್.ದೊರೆಸ್ವಾಮಿ | ಲಿಂಗಾಯಿತ | ೩೭ | ಬಿ.ಎ. .ಬಿ.ಎಡ್ | ಪೊಲೀಸ್‌ಪೇದೆ | ರಾಮನಾಥಪುರ |
| ಆರ್.ಪಿ.ಗೋವಿಂದರಾಜು | ದಲಿತ | ೪೦ | ಎಂ.ಎ.ಎಂ.ಎಡ್ | ಉಪನ್ಯಾಸಕರು | ರಾಮನಾಥಪುರ |
| ಅರುಂಧತಿ | ಬ್ರಾಹ್ಮಣ | ೫೭ | ಎಸ್.ಎಸ್.ಎಲ್.ಸಿ | ಗೃಹಿಣಿ | ರಾಮನಾಥಪುರ |
| ಸರಸ್ವತಿ | ಬ್ರಾಹ್ಮಣ | ೪೦ | ಬಿ.ಎ. | ಗೃಹಿಣಿ | ರಾಮನಾಥಪುರ |

# ಆಕರ ಗ್ರಂಥಸೂಚಿ


೧. ಅರಕಲಗೂಡು ತಾಲ್ಲೂಕು ಸಂಸ್ಕೃತಿ ಹಿರಿಮೆ – ನಿಂಬೇಹಳ್ಳಿ ಚಂದ್ರಶೇಖರ್ ಅರಕಲಗೂಡು ಸಂಗಾತಿ ಪತ್ರಿಕೆ

೨. ಎಪಿಗ್ರಾಫಿಯಾ ಕರ್ನಾಟಕ – ಸಂಪುಟ-೮ (ಪರಿಷ್ಕೃತ) ಮೈಸೂರು ೧೯೮೪

೩. ಕರ್ನಾಟಕ ಜಾತ್ರೆಗಳು – ಸಂಪಾದಕರು :ಸಿ.ಎಸ್.ಶಿವಕುಮಾರಸ್ವಾಮಿ ಲೇಖನ : ಮಳಲಿ ವಸಂತಕುಮಾರ್ ಅವರ ಹಾಸನ ಜಿಲ್ಲೆ ಜಾತ್ರೆಗಳು

೪. ಹೊಯ್ಸಳ ಸಂಪದ – ಪ್ರ.ಸಂ. ಮಳಲಿ ವಸಂತಕುಮಾರ್ ಸ್ವಾಗತ ಸಮಿತಿ; ಅ.ಭಾ.೬೫ ನೇ ಕ.ಸಾ.ಸ. ಹಾಸನ ೧೯೯೬

೫. ರಾಮನಾಥಪುರ ಕ್ಷೇತ್ರ ಮಹಾತ್ಮೆ – ಆರ್.ಎಸ್.ಸುಬ್ರಹ್ಮಣ್ಯ ಆಚಾರ್ಯ ಪ್ರ;ಪ್ರಸನ್ನ ಸಾಹಿತ್ಯ ಭಾರತಿ ಮುದ್ರಣ ೧೯೯೨

೬. ಕೊಳಲು – ವಾರ್ಷಿಕ ಸಂಚಿಕೆ. ಬಿ.ಎಮ್.ಶೆಟ್ಟಿ ಸರ್ಕಾರಿ ಪದವಿ ಕಾಲೇಜು ಸಂ. ಕವಿತಾ ಮೋಹನ್

೭. ಶ್ರೀ ಚಂದ್ರಶೇಖರ ಧೂಲೇಕರ ಲೇಖನ – ಕನ್ನಡ ಪ್ರಭ ಪತ್ರಿಕೆ ದಿನಾಂಕ: ೬-೯-೧೯೯೭

೮. ಶ್ರೀ ಪಿ.ಸೋಮಚಂದ್ರ ಅವರ – ರಾ.ಸೇ.ಯೋ. ವಾರ್ಷಿಕ ವಿಶೇಷ ಶಿಬಿರದ ವರದಿ



ಶ್ರೀ ರಾಮೇಶ್ವರ ದೇವಾಲಯದ ಗೋಪುರ



ಪ್ರಸನ್ನ ಶ್ರೀ ಸುಬ್ರಹ್ಮಣ್ಯ ಸ್ವಾಮಿ



ಶ್ರೀ ವ್ಯಾಸಾಂಜನೇಯ ದೇವರು



ಶ್ರೀ ಪಟ್ಟಾಭಿ ರಾಮ

# ರಾಮನಾಥಪುರ ನಕ್ಷೆ

1. ಕಾವೇರಿ ನದಿ
2. ವಹ್ನಿ ಪುಷ್ಕರಿಣಿ
3. ಗಾಯತ್ರೀ ಶಿಲೆ
4. ಗೋಗರ್ಭ
5. ಕುಮಾರಧಾರಾ ತೀರ್ಥ
6. ಶ್ರೀ ರಾಮೇಶ್ವರ ದೇವಸ್ಥಾನ
7. ಶ್ರೀ ಅಗಸ್ತ್ಯೇಶ್ವರ ದೇವಸ್ಥಾನ
8. ಪ್ರಸನ್ನ ಶ್ರೀ ಸುಬ್ರಹ್ಮಣ್ಯ ಸ್ವಾಮಿ ದೇವಸ್ಥಾನ
9. ಶ್ರೀ ಪಟ್ಟಾಭಿರಾಮ ದೇವಸ್ಥಾನ
10. ಶ್ರೀ ಲಕ್ಷ್ಮೀನರಸಿಂಹ ಸ್ವಾಮಿ ದೇವಸ್ಥಾನ
11. ಶ್ರೀ ಲಕ್ಷ್ಮಣೇಶ್ವರ
12. ವಾಸವಾಪುರಿ ಆಂಜನೇಯ
13. ಶ್ರೀ ವ್ಯಾಸಾಂಜನೇಯ
14. ಅಶ್ವತ್ಥಕಟ್ಟೆ
15. ರಾಘವೇಂದ್ರ ಪ್ರತಿಷ್ಠಿತ ಪ್ರಾಣದೇವರ ಸಾನ್ನಿಧ್ಯ
16. ಶ್ರೀ ಆಂಜನೇಯ
17. ಶ್ರೀ ಪರಕಾಲ ಮಠ
18. ಶ್ರೀ ವರದಾನ ಬಸವೇಶ್ವರ
19. ಕನ್ಯಕಾಪರಮೇಶ್ವರಿ
20. ಕಾಲುವೆ ಅಮ್ಮನವರು ಮತ್ತು ಕನ್ನಂಬಾಡಿಯಮ್ಮ
21. ಕಲ್ಯಾಣ ಮಂಟಪ
22. ಕೋಟವಾಳಮ್ಮ
23. ಶ್ರೀ ಅಂಗದೇಶ್ವರ
24. ಪ್ರಮುಖ ಬಸ್ ನಿಲ್ದಾಣ
25. ಬಸ್ ನಿಲ್ದಾಣ

A. ಹಾಸನ ಕಡೆಗೆ
B. ಮೈಸೂರು ಕಡೆಗೆ
C. ಮಡಿಕೇರಿ ಕಡೆಗೆ
C. ಹುಣಸೂರು ಕಡೆಗೆ

